ಶ್ರೀ ಶೇಷಾಚಲ ಗ್ರಂಥಮಾಲೆ, ಆನಂದವನ



# ಮಣಿ.



ಕೆ. ಸಂಜುಂಡರಾವ್

೬ ಆಣೆ




ಶ್ರೀ ಶೇಷಾಚಲ ಪ್ರೆಸ್ಸು ಮತ್ತು ಗ್ರಂಥಮಾಲೆ,

ಪೊ. ಆನಂದವನ, ಜಿ. ಧಾರವಾಡ.

श्री शेषाचल प्रेस व ग्रंथमाला.

पो. आनंदवन, जि. धारवाड.

SHRI SHESHACHAL PRESS & GRANTHAMALA,

POST. ANANDVAN, DIST Dharwar


# ಮಣಿ.


ಲೇಖಕ:

ಕೆ. ನಂಜುಂಡರಾವ್

ಪಾವಗಡ.


—:—


1937

೬ ಆಣೆ

ಪ್ರಕಾಶಕ

ಭಿ. ಪ. ಕಾಳೆ,

ಶ್ರೀ ಶೇಷಾಚಲ ಗ್ರಂಥಮಾಲಾ,

ಆನಂದವನ



[೧ನೇ ಮುದ್ರಣ]

ಇದನ್ನು ಭಿ. ಪ. ಕಾಳೆ ಇವರು ಆನಂದವನ-ಅಗಡಿ
ಯೊಳಗಿನ ತಮ್ಮ ಶ್ರೀ ಶೇಷಾಚಲ ಪ್ರಿಂಟಿಂಗ
ಪ್ರೆಸ್ಸಿನಲ್ಲಿ ಮುದ್ರಿಸಿದರು.



# ವಿಜ್ಞಾಪನೆ.

ಈ ಕಾದಂಬರಿಯ ಹೆಸರನ್ನು ಕೇಳಿದೊಡನೆಯೇ ವಾಚಕ ಮಹಾಶಯರು, "ಇದು ಯಾವ ಮಣಿ? ಕರಿ ಮಣಿಯೇ? ಕೆಂಪು ಮಣಿಯೇ? ನೀಲ ಮಣಿಯೇ?" ಎಂದು ಮುಂತಾದ್ದಾಗಿ ತರ್ಕಿಸಿ ಕೊಳ್ಳಬಹುದು.

ಇದು ಊಹೆಗೆ ಬಾರದೆ ಮನಸ್ಸಿಗೆ ಸಿಲುಕದೆ-ಇರುವ ಯಾವ ಮಣಿಯೂ-ಆಗಿರದೆ,- ಪ್ರಿಯನು ತನ್ನ ಪ್ರಿಯಳ ಉದಾರ-ಸಹನ-ಸದ್ಗುಣಗಳಿಗಾಗಿ ಕೊಟ್ಟ ಮಮತೆಯ ಭಳುವಳಿ. ಹೆಸರಿಗಿಂತಲೂ ಗುಣವೇ ಶ್ರೇಷ್ಠವಾದುದೆಂದೂ, ಓದುಗರ ಮನದಲ್ಲಿ ಸದ್ಗುಣಸಾರವಾದ "ಮಣಿ"ಯ ವಿವರಣೆಯು ಅಳಿಯದೆ ಸ್ಥಿರವಾಗಿ ಮೂಡಬೇಕೆಂದೂ ಸಂಕಲ್ಪಿಸಿ, ಇದಕ್ಕೆ ಆ ಹೆಸರು ಇಡಲಾಗಿದೆ.

ಕೇವಲ ನೀಚ ಜಾತಿಯಲ್ಲಿ ಉತ್ಪನ್ನರಾದರೂ ಸುಗುಣರಾಗಿಯೂ, ಶ್ರೇಷ್ಠ ಕುಲದಲ್ಲೇ ಜನಿಸಿದರೂ ನೀಚರಾಗಿಯೂ ಇರುವವರು ಆಗಾಗ ನಮಗೆ ಕಾಣುತ್ತಲೇ ಇರುತ್ತಾರೆ. ಆದುದರಿಂದ "ಗುಣವೆಂಬುದು ಮತಗಳನ್ನು ಆಶ್ರಯಿಸಿರುವುದಿಲ್ಲ." ಎಂದ ಮೇಲೆ, ಗುಣ ಪ್ರಾಧಾನ್ಯವೇ ವಿನಾ ಜಾತಿ, ಮತ ಇತ್ಯಾದಿಗಳು ಪ್ರಾಧಾನ್ಯವಲ್ಲವೆಂಬುದನ್ನು ತೋರಿಸಲು ಚಿತ್ರಿಸಿರುವ ವಿಷಯದ ಸಾರಾಂಶವೇ ಈ ಕಾದಂಬರೀಸ್ವರೂಪವು.

ವಾಚಕರೂ ಸಹ ಗುಣೈಕ ಪಕ್ಷಪಾತಿಗಳಾಗಿ ಕಥಾಭಾಗದಲ್ಲಿನ ಸುಗುಣವನ್ನೇ ಗ್ರಹಣಮಾಡಿಕೊಂಡಲ್ಲಿ, ಗ್ರಂಥಕರ್ತನು ತನ್ನ ಶ್ರಮವು ಸಾರ್ಥಕವಾಯಿತೆಂದು ನಂಬುತ್ತಾನೆ. ಇತಿ

ಧಾತುನಾಮ ಸಂವತ್ಸರದ
ನಿಜ ಭಾದ್ರಪದ ಶುದ್ಧ
ವಿನಾಯಕ ಚತುರ್ಥಿ

**ಕೆ. ನಂಜುಂಡರಾವ್,**
ಪಾವಗಡ
19-9-36

# ಪ್ರಕಾಶಕನ ಎರಡು ಮಾತುಗಳು.

ಈ ಪುಟ್ಟ ಕಾದಂಬರಿಯನ್ನು ಪಾವುಗಡದ ಶ್ರೀಮಾನ್ ಶಾನುಭೋಗ ಕೆ. ನಂಜುಂಡರಾಯರು ಬರೆದಿರುವರು. ಈ ಲೇಖಕರು ಮೈಸೂರು ಮಂಗಳೂರು ಕಡೆಗೆ ಪ್ರಕಟವಾಗುತ್ತಿರುವ ಹಲವು ಕನ್ನಡ ಪತ್ರ-ಪತ್ರಿಕೆಗಳಲ್ಲಿ ಆಗಾಗ ತಮ್ಮ ಉತ್ತಮ ಲೇಖನಗಳನ್ನು ಪ್ರಕಟಿಸಿ, ವಾಙ್ಮಯ ಸೇವೆಯನ್ನು ಬಹು ಆಸ್ಥೆಯಿಂದ ಮಾಡುತ್ತಲಿರುವರು.

ನಮ್ಮ ಗ್ರಂಥಮಾಲೆಯ ವಾಚಕರಿಗೆ ಇವರ ಈ ಕೃತಿಯು ರುಚಿಸಬಹುದೆಂದು ಬಗೆದು, ನಾವು ಇದನ್ನು ಪ್ರಕಟಿಸಿರುವೆವು; ಹಾಗು ಇನ್ನು ಮುಂದಾದರೂ ಇವರ ಐತಿಹಾಸಿಕ-ಸಾಮಾಜಿಕ ಕೃತಿಗಳನ್ನು ನಮ್ಮ ವಾಚಕರ ಮುಂದಿಡಬೇಕೆಂದು ಯೋಚಿಸಿರುವೆವು. ಯಾವುದಕ್ಕೂ ಕನ್ನಡ ಉದಾರ ವಾಚಕರ ಸಹಾನುಭೂತಿಯೇ ಮುಖ್ಯ ಕಾರಣವಾಗಿದೆ. ಅದನ್ನು ಒದಗಿಸುವ ಸದ್ಬುದ್ಧಿಯನ್ನು ವಾಚಕವೃಂದಕ್ಕೂ, ಉತ್ತಮ ಲೇಖನಗಳನ್ನು ಪರಿಶ್ರಮಪೂರ್ವಕವಾಗಿ ಲೇಖಿಸಿಕೊಡುವ ಜಾಣ್ಮೆಯನ್ನು ಲೇಖಕರಿಗೂ ದಯಪಾಲಿಸಲೆಂದು ಶ್ರೀ ಸದ್ಗುರುವನ್ನು ಕುರಿತು ಪ್ರಾರ್ಥಿಸುವೆವು.

ಆನಂದವನ, 18-1-1937 —ಪ್ರಕಾಶಕ.





# ಮಣಿ.

[೧]




ಪವೊಂದು ಕಡೆ ಸ್ವಚ್ಛಕಾಂತಿಯಿಂದ ಉರಿಯುತ್ತಿದ್ದಿತು. ಆ ಮನೆಯಲ್ಲಿ ನಿಶ್ಶಬ್ದವು ಮೂರ್ತಿಮತ್ತಾಗಿದ್ದಿತು. ರೋಗಿಯೋರ್ವನು ನರಳುತ್ತಾ ಹಾಸಿಗೆಯ ಮೇಲೆ ಬಿದ್ದಿದ್ದನು. ಕಂಠದವರೆಗೂ ಹೊದಿಸಿದ್ದ ಬಟ್ಟೆಯ ಮರೆಯಲ್ಲಿ ಆತನ ಅಂಗಾಂಗಗಳೆಲ್ಲವೂ ಮುಚ್ಚಲ್ಪಟ್ಟಿದ್ದುವು. ಆತನ ಮುಖವು ಶುಷ್ಕವಾಗಿ, ಕಾಂತಿವಿಹೀನವಾಗಿದ್ದಿತು. ಒಮ್ಮೊಮ್ಮೆ ಆತನು ಕಣ್ಣುಗಳನ್ನು ಮುಚ್ಚುತ್ತಲೂ ತೆರೆಯುತ್ತಲೂ, ಹೆಚ್ಚು ಆಯಾಸವುಂಟಾದಾಗ, ಅತಿ ಕಷ್ಟದಿಂದ ಹಲ್ಲುಗಳನ್ನು ಬಿಗಿಹಿಡಿಯುತ್ತಲೂ, ಬಹಳ ವೇದನೆಯನ್ನನುಭವಿಸುತ್ತಿದ್ದನು.

ಆತನ ಸಮೀಪದಲ್ಲಿ ಓರ್ವ ಬಾಲೆಯು ಅನಿಮಿಷ ನಯನೆಯಾಗಿ, ರೋಗಿಯ ಮುಖವನ್ನು ನೋಡುತ್ತಿದ್ದಳು. ರೋಗಿಯು ಹೆಚ್ಚು ಸಂಕಟವನ್ನನುಭವಿಸುವಾಗ ಆಕೆಯ ಕಣ್ಣಿನಿಂದ ಬಿಸಿ ನೀರಿನ ಕೆಲ ತೊಟ್ಟುಗಳು ಪೊರಗುರುಳಿ ಬರುತ್ತಿದ್ದುವು.

ಮತ್ತೊಂದು ಕಡೆ ಚಾಪೆಯ ಮೇಲೆ ಸುಮಾರು ನಲವತ್ತು ವಯಸ್ಸಿನ ಪುರುಷನೊಬ್ಬನು ಕುಳಿತಿದ್ದನು. ಆತನು ಒಮ್ಮೆ ಯೋಚಿಸುತ್ತಲೂ, ಒಮ್ಮೆ ನಿಟ್ಟುಸಿರು ಬಿಡುತ್ತಲೂ, ಒಮ್ಮೆ ಹುಬ್ಬುಗಳನ್ನು ಸಂಕುಚಿತ ಮಾಡಿ ತಲೆಬಾಗಿಲ ಕಡೆ ನೋಡು ತ್ತಲೂ ಇದ್ದನು.

ಆಗ ಮನೆಯ ಮುಂದಿನ ಆಳು ಒಳಕ್ಕೋಡಿ ಬಂದು:— "ವೈದ್ಯರು ಬಂದರು," ಎಂದು ಹೇಳಿದನು. ರೋಗಿಯ ಬಳಿ ಇದ್ದ ಹುಡುಗಿಯು ಸ್ವಲ್ಪ ದೂರ ಸರಿದು ನಿಂತಳು. ಪುರುಷನು ಹಾಗೆಯೇ ಎದ್ದು ನಿಂತನು. ಮರುಕ್ಷಣದಲ್ಲಿಯೇ ಸೀಸೆಯನ್ನು ಹಿಡಿದಿದ್ದ ವೈದ್ಯನು ಪ್ರವೇಶ ಮಾಡಿದನು. ಪುರುಷನು ಆತನಿಗೆ ಸ್ವಾಗತವಿತ್ತು ಸತ್ಕರಿಸುತ್ತಾ: 'ಏನು, ಈ ದಿನ ಬಹಳ ಹೊತ್ತು ಮಾಡೋಣವಾಯಿತು?' ಎಂದು ಕೇಳಿದನು.

ವೈದ್ಯ:—ಔಷಧಿಗಳನ್ನು ತಯಾರಿಸಬೇಕಾದರೆ ಕಾಲ ವಿಳಂಬವಾಯಿತು. ಅದಿರಲಿ. ಹೇಗಿದೆ?

ಪುರುಷ:—"ಒಂದು ಗಂಟೆಯ ಹಿಂದೆ ಮುಖವನ್ನೊಮ್ಮೆ ವಿಕಾರ ಮಾಡಿ, ಏನೋ ಒಂದು ಕೀರಲು ಧ್ವನಿಯಿಂದ ಕೂಗಿ ಕೊಂಡರು. ತಾವು ಪರೀಕ್ಷಿಸಿದರೆ ಗೊತ್ತಾಗುವದಿಲ್ಲವೇ?''"

ವೈದ್ಯ:—"ಹುಂ........"

ಪುರುಷ:—ಏನು ಖಾಯಿಲೆ, ಸ್ವಾಮಿ, ಇದು?

ವೈದ್ಯ:—ಏನಯ್ಯಾ, ನಿನಗೆಷ್ಟು ಧೈರ್ಯಹೇಳಿದರೂ ದಿನ ದಿನವೂ ಹೀಗೆ ಕೇಳುತ್ತಿರುವೆ? ಇದು ಯಾವುದೇ ಇರಲಿ, ಸದ್ಯ ದಲ್ಲಿ ಪಿತ್ತವು ಹೆಚ್ಚಿ ವಿಕಾರಕ್ಕಿಟ್ಟಿದೆ.

ಹೀಗೆಂದು ಹೇಳಿ, ವೈದ್ಯನು ರೋಗಿಯ ಸಮೀಪದಲ್ಲಿ

ಬಂದು ಕುಳಿತು, ನಾಡಿಯನ್ನು ನೋಡಿ, ತಲೆಯನ್ನು ತೂಗಿ ಸುತ್ತಾ ಪುರುಷನ ಕಡೆ ಮುಖ ತಿರುವಿ: "ನೋಡಿದೆಯಾ, ಬೆಳಗಿನ ನನ್ನ ಔಷಧಿಯು ಶರೀರದೊಳಗೆ ಎಷ್ಟು ಕೆಲಸ ಮಾಡಿದೆ!" ಎಂದನು.

ಪುರುಷ:--"ಮುಖ್ಯನಾಗಿ ತಮ್ಮ ಅನುಗ್ರಹಪಿಶೇಷ."

ವೈದ್ಯ:—"ಎಲ್ಲಾ ಈಶ್ವರನದು! ನಮ್ಮದೇನಿದೆಯ್ಯಾ? ಆಗಲಿ. ನಾಳೆಯ ದಿನಕ್ಕೆ ಬೇರೆ ಕೆಲವು ಔಷಧಿಗಳನ್ನು ತಯಾರಿಸಬೇಕಾಗಿರುವದಲ್ಲಾ?"

ಪುರುಷ:--ಅದಕ್ಕೇನಾಗಬೇಕು?

ವೈದ್ಯ:—ಸದ್ಯಕ್ಕೆ ಅವರ ಸಾಮಾನುಗಳ ವೆಚ್ಚವು ಇಪ್ಪತ್ತೈದು ರೂಪಾಯಿಗಳು ಮಾತ್ರವಾಗುತ್ತದೆ.

ಆಗ ಪುರುಷನು ಕೊಂಚ ಯೋಚಿಸಿ, ಅನಂತರ "ಊಂ ಆಗಲಿ," ಎಂದು ಹೇಳುತ್ತಾ ಕಿಸೆಯಿಂದ ಹಣವನ್ನು ತೆಗೆದು ಕೊಟ್ಟನು. ವೈದ್ಯನು ಹಸನ್ಮುಖನಾಗಿ: "ತಾವೇನೂ ಯೋಚಿಸಬೇಡಿ. ಈ ಶೀಸೆಗಳಲ್ಲಿನ ಔಷಧವನ್ನು ಯಾಮಕ್ಕೊಂದು ಸಲದಂತೆ ಕುಡಿಸುತ್ತಿರಿ. ಐದು ದಿನಗಳೆನ್ನುವುದರಲ್ಲಿ ಇವರೆದ್ದು ಓಡಾಡುವಂತೆ ಮಾಡದಿದ್ದರೆ, ನನ್ನನ್ನು ವೈದ್ಯನೆಂದು ಕರೆಯಬೇಡಿ."

ಪುರುಷ:—"ಎಲ್ಲವೂ ತಮಗೇ ಸೇರಿದ್ದು."

ವೈದ್ಯ:—ಆಗಲಿ, ದೇವರಿದ್ದಾನೆ. ನಾನಿನ್ನು ಬರುವೆನು. ಹೀಗೆಂದು ಹೇಳಿ ವೈದ್ಯಮಹಾಶಯನು ಹೊರಟು ಹೋದನು. ಆ ಪ್ರದೇಶವು ಮತ್ತೆ ಮೌನವನ್ನಾಶ್ರಯಿಸಿತು. ಕೊಂಚ ಹೊತ್ತು ಹಾಗಿದ್ದ ಬಳಿಕ ಹುಡುಗಿಯು ರೋಗಿಯ ಸಮೀಪಕ್ಕೆ

ಬಂದು ಕುಳಿತು, ಮೊದಲಿನಂತೆ ರೋಗಿಯ ಮುಖವನ್ನು ನೋಡಹತ್ತಿದಳು. ಆಗ ರೋಗಿಯು ಕಣ್ಣುಗಳನ್ನು ಪ್ರಯತ್ನ ಪೂರ್ವಕವಾಗಿ ಅರಳಿಸಿ, ಹುಡುಗಿಯನ್ನು ನೋಡಿದನು. ಆ ತೇಜೋವಿಹೀನವಾದ ನಯನಗಳು ಅಶ್ರುಗಳಿಂದ ಒದ್ದೆಯಾಗಿ ಮತ್ತಷ್ಟು ಕಾಂತಿವಿಹೀನವಾಗಿ ತೋರಿತು. ಮಳೆ ಬಂದು ನಿಂತ ಮೇಲೆ ವೃಕ್ಷಪತ್ರಗಳಲ್ಲಿನ ನೀರು, ಮಾರುತನ ಹೊಡೆತಕ್ಕೆ ಹೇಗೆ ಕೆಳಕ್ಕುರುಳುವುದೊ, ಹಾಗೆ ತನ್ನ ಸಂಕಟವನ್ನೆಲ್ಲಾ ನುಂಗಿ ಕೊಂಡು ಒಳಗೇ ಅಡಗಿಸಿಕೊಂಡಿದ್ದ ಆ ಬಾಲೆಯ ಕಣ್ಣು ಗಳೊಳಗಿನ ಅಶ್ರುವಾರಿಯು, ರೋಗಿಯ ದೀನದೃಷ್ಟಿಯ ಹೊಡೆತ ದಿಂದ ದರದರನೆ ಕೆಳಕ್ಕುರುಳಿ ಹೋಯಿತು! ರೋಗಿಯು ನಾಲಿಗೆ ಯನ್ನು ಮುಂದಕ್ಕೆ ಚಾಚಿ ತುಟಿಗಳನ್ನು ಸವರುತ್ತಾ ಏನೋ ಇಚ್ಛಿಸುವನಂತೆ ಕಂಡನು. ಹುಡುಗಿಯು ಕೂಡಲೆ ಅದರ ಇಂಗಿತವನ್ನರಿತು, ಉದ್ಧರಣೆಯಿಂದ ಉದಕವನ್ನು ತೆಗೆದು ರೋ ಗಿಯ ಬಾಯಲ್ಲಿ ಹಾಕಿದಳು. ರೋಗಿಯು ಕೊಂಚ ಸಮಾಧಾನ ಸ್ಥಿತಿಯಿಂದ ಚೇತರಿಸಿಕೊಂಡವನಂತೆ ಕಂಡನು. ಅನಂತರ ಆತನು: 'ಪುಟ್ಟೂ....' ಎಂದು ಹೇಳಿ ಸುಮ್ಮನಾದನು. ಹುಡು ಗಿಯು 'ಅಪ್ಪಾ' ಎಂದಳು ಮೃದುವಾಗಿ.

ರೋಗಿ:—"ಪುಟ್ಟೂ, ನಾನಿನ್ನು.....ಬಹು ಕಾಲ.....ಬದು ಕುವ ಹಾಗಿಲ್ಲ. ಬಹಳ....ಬಾ....ಯಾ...." ಎಂದು ಹೇಳಿ ಸುಮ್ಮ ನಾದನು.

ಹುಡುಗಿಯು ಭಯಕಂಪಿತಳಾಗಿ ದುಃಖಿಸುತ್ತಾ ಉದ್ಧರ ಣೆಯಿಂದ ಉದಕವನ್ನು ತುಂಬ ಹಾಕುತ್ತಿದ್ದಳು. ಪುರುಷನಾಗ ರೋಗಿಯ ಸಮೀಪಕ್ಕೆ ಬಂದು:—"ನೀವು ಮಾತನಾಡಿದರೆ

ಆಯಾಸವಾಗುವದು. ಗುಣವಾದನಂತರ ಇಚ್ಛಾನುಸಾರ ಮಾತ ನಾಡಬಹುದು. ವೈದ್ಯರು ಈಗ ಬಂದು ಹೇಳಿ ಹೋದದ್ದು ತಮಗೂ ಗೊತ್ತಿರಬಹುದು." ಎಂದು ಹೇಳಿದನು. ಅದಕ್ಕೆ ರೋಗಿಯು: "ಶ್ರೀಧರಾ, ಆ ಹಾಳು ಔಷಧವನ್ನು ಬೇಡವೆಂದರೂ ಬಲವಂತ ಮಾಡಿ ಕುಡಿಸುವೆ. ಇದು ಔಷಧದಿಂದ ಗುಣವಾಗುವ ಖಾಯಿಲೆಯಲ್ಲ. ನಾನು ಹೇಳಿದರೆ ನೀನು ಕೇಳುವಂತಿಲ್ಲ. ಹುಂ ....ವಾಹ...."

ಮತ್ತೆ ಹುಡುಗಿಯು ನೀರು ಹಾಕಿದಳು. ರೋಗಿಯು ಮಾತನಾಡತೊಡಗಿದನು: "ಶ್ರೀಧರ, ನನ್ನ ಕಡೆಯ ಮಾತನ್ನು ನಡೆಯಿಸಿ ಕೊಡುವೆಯಾ?"

ಶ್ರೀಧರ:—ನನ್ನ ಮಾತಿನಲ್ಲಿ ವಿಶ್ವಾಸವಿಡಿ. ತಮಗೇನು ಬೇಕೋ ತಿಳಿಸಿ.

ರೋಗಿಯಾಗ ಹುಡುಗಿಯ ಕಡೆ ನೋಡಿ: "ಪುಟ್ಟೂ, ನಿನ್ನ ಕೈಯನ್ನು ನನ್ನ ಎದೆಯ ಮೇಲಿಡುವಿಯಾ?" ಎಂದನು. ಹುಡುಗಿಯು ಹಾಗೆ ಮಾಡಿದಳು. ರೋಗಿಯು ತನ್ನ ಕೈಯಿಂದಲವಳ ಕೈಯನ್ನು ಸವರುತ್ತಾ: "ಶ್ರೀಧರಾ, ನಿನ್ನ ಕೈಯನ್ನು ನನ್ನ ಹಸ್ತದ ಮೇಲಿಡು," ಎಂದು ಹೇಳಿದನು. ಆತನೂ ಹಾಗೆಯೇ ಮಾಡಿದನು. ರೋಗಿಯು ಹೇಳತೊಡಗಿದನು: "ನಾನು ಹೇಳುವುದನ್ನು ಕೇಳಿ ಇಬ್ಬರೂ ಭಯವಾಗಲಿ, ಆಶ್ಚರ್ಯವಾಗಲಿ ಪಡಬೇಕಾಗಿಲ್ಲ." ಇಬ್ಬರೂ ಸುಮ್ಮನಿದ್ದರು. ರೋಗಿಯು ಹೇಳತೊಡಗಿದನು: "ನಾನಿನ್ನು ಬಹಳ ಕಾಲವಿರಲಾರೆ. ವೈದ್ಯನು ಹಣದಾಶೆಗಾಗಿ ಹೇಳುವುದನ್ನು ನಿಜವೆಂದು ನೀವು ತಿಳಿಯುತ್ತೀರಿ. ಇರಲಿ. ಶ್ರೀಧರ, ನಾನು ನಿನ್ನನ್ನು ಕೇಳಿಕೊಳ್ಳುವುದೊಂದುಂಟು. ಅದನ್ನು

ನೀನು ನಡೆಯಿಸಿಕೊಡುವಿಯೆಂದು ಅಭಯವಿತ್ತರೆ, ನಾನು ಸುಖ ದಿಂದ ಪ್ರಾಣಬಿಡುವೆನು.

ಶ್ರೀಧರ:—‘‘ಆಗಲಿ. ಏನನ್ನು ಹೇಳುವಿರೋ, ಮರೆಮಾ-ಚದೆ ಹೇಳಿ.’’

ರೋಗಿಯು ಹೇಳತೊಡಗಿದನು: ‘‘ಕುಮುದೆಯು ಅನಾಥ ಹುಡುಗಿ. ಇವಳನ್ನು ಕಾಪಾಡುವ ಭಾರವು ನಿನ್ನದು....” ನಡುವೆ ಶ್ರೀಧರನು ಬಾಯಿ ಹಾಕಿ: ‘‘ಇಷ್ಟು ತಾನೆ! ನೀವು ಹೇಳಿದರೂ ಹೇಳದಿದ್ದರೂ ನಾನವಳನ್ನು ಕೈ ಬಿಡುವೆನೆ?’’ ಅದಕ್ಕೆ ರೋಗಿ-ಯು ‘‘ಅಷ್ಟೇ ಅಲ್ಲ. ಇನ್ನೂ ಹೇಳತಕ್ಕದ್ದಿದೆ. ದಾಹ....” ಎಂದು ಸುಮ್ಮನಾದನು. ಹುಡುಗಿಯು ನೀರನ್ನು ಹಾಕಿದಳು. ಶ್ರೀಧ ರನು: ‘ಮತ್ತೇನು ಹೇಳಿ?’ ಎಂದನು. ರೋಗಿಯು ಹೇಳತೊಡ ಗಿದನು: ‘‘ನನ್ನ ಮರಣಾನಂತರ ಅಳಿಯನೆಲ್ಲಿದ್ದರೂ ಹುಡುಕಿಸಿ ಇವಳನ್ನವನಿಗೊಪ್ಪಿಸಿ ಆಸ್ತಿಯನ್ನಿವರಿಬ್ಬರ ವಶಪಡಿಸುವ ಭಾ-ರವು ನಿನ್ನದು. ಅಳಿಯನು ಸಿಗುವವರೆಗೂ ಆಸ್ತಿಯನ್ನು ಪೋಲು ಮಾಡದಂತೆ ನಿನ್ನಧೀನದಲ್ಲಿಯೇ ಇಟ್ಟುಕೊಂಡಿರತಕ್ಕದ್ದು; ಅಲ್ಲದೆ ಅದರ ವಿಷಯವಾಗಿ ನಾನಾಗಲೇ ವಿಲ್ಲ ಬರೆದಿದ್ದೇನೆ. ದಾಹ..”

ಹುಡುಗಿಯು ಮತ್ತೆ ನೀರು ಹಾಕಿದಳು. ರೋಗಿಯು ಹೇಳತೊಡಗಿದನು: ‘‘ಮಗಳು ಪ್ರಾಪ್ತ ವಯಸ್ಕಳಾಗುವ ಹೊತ್ತಿಗೆ ಯಾವತ್ತೂ ಆಸ್ತಿಯು ಅವಳಿಗೆ ಸಲ್ಲುವಂತೆಯೂ, ಆ ವರೆವಿಗೂ ಅವಳು ನಿನ್ನ ಪೋಷಣೆಯಲ್ಲಿರಬೇಕೆಂದೂ ಮುಂತಾ ದಾಗಿ ಬರೆದಿದ್ದೇನೆ. ಅದರಂತೆ ನೀನು ಒಪ್ಪಿ ನನಗಭಯವನ್ನು ಕೊಡುವಿಯಾ?’’ ಎಂದು ಹೇಳಿ ಸುಮ್ಮನಾಗಿ, ಶ್ರೀಧರನ ಮುಖ ವನ್ನೇ ನೋಡಹತ್ತಿದನು.

ಆಗ ಶ್ರೀಧರನು ರೋಗಿಯ ಹಸ್ತದ ಮೇಲೆ ತನ್ನ ಹಸ್ತವನ್ನಿಟ್ಟು: ‘‘ದೇವರ ಸಾಕ್ಷ್ಯವಾಗಿಯೂ ಮತ್ತು ತಮ್ಮ ಸಾಕ್ಷ್ಯವಾಗಿಯೂ ನಾನು ಪ್ರಮಾಣ ಮಾಡಿ ಹೇಳುತ್ತೇನೆ. ತಮ್ಮ ಅನುಮತಿಯಂತೆ ನಾನು ನಡೆದು ನಿಮ್ಮ ಮಗಳ ಕಲ್ಯಾಣವನ್ನು ಮಾಡುವೆನು. ತಾವು ಮನಸ್ಸಿನ ಶಂಕೆಯಿಂದ ದೂರಾಗಬಹುದು,’’ ಎಂದು ಹೇಳಿದನು. ಆಗ ರೋಗಿಯ ಮುಖದಲ್ಲಿ ಕೊಂಚ ಸಂತೋಷಚಿಹ್ನೆಯು ತೋರಿದಂತಾದರೂ, ಅದು ಹೆಚ್ಚು ಹೊತ್ತಿರಲಿಲ್ಲ. ಶ್ರೀಧರನು:—‘‘ನೀವು ಯಾವದೊಂದು ಕೊರತೆಯನ್ನೂ ಮನಸ್ಸಿನಲ್ಲಿ ತರಬೇಡಿ. ದೇವರನ್ನು ಸ್ಮರಿಸುತ್ತಿರಿ,’’ ಎಂದು ಹೇಳಿದನು. ರೋಗಿಗೆ ಬಿಕ್ಕಳಿಕೆಗಳಿಗೆ ಪ್ರಾರಂಭವಾಯಿತು. ಆಗ ಕುಮುದೆಯು ‘‘ಅಪ್ಪಾ’’ ಎಂದಳು ಅಳುತ್ತಾ. ರೋಗಿಯು ಮಗಳ ಕಡೆ ತಲೆ ತಿರುಗಿಸಲು ಆಗಲಿಲ್ಲ. ಅತಿ ಕಷ್ಟದಿಂದ ದೃಷ್ಟಿಯನ್ನು ಮಾತ್ರ ಹೊರಳಿಸಿದನು. ನಾಲ್ಕು ಕಣ್ಣುಗಳೂ ಕಲೆತವು. ಆಗಿನ ಆ ತಂದೆ-ಮಗಳ ದುಃಖವನ್ನು ಬಣ್ಣಿಸಲಾಗದು! ರೋಗಿಯು ಕಣ್ಣನ್ನು ಅಗಲಿಸಿ: ‘‘ಕು....ಮು....ದಾ,....ಹೋಗಿ....ಬ....ರು....ತ್ತೇ....ನೆ....’’ ಎಂದು ಹೇಳುತ್ತಿದ್ದಂತೆಯೇ ಪ್ರಾಣವಾಯುವು ಹಾರಿ ಹೋಯಿತು! ಶ್ರೀಧರನು: ‘‘ನಾರಾಯಣ, ನಾರಾಯಣ’’ ಎಂದು ಕಿವಿಯ ಬಳಿ ಕೂಗಿ ಹೇಳುತ್ತಿದ್ದನು. ಅರಿಯದ ಹುಡುಗಿಯು ಮತ್ತೆ ‘ಅಪ್ಪಾ’ ಎಂದಳು. ಈ ಸಲ ಪ್ರತ್ಯುತ್ತರವಿಲ್ಲ. ನೋಟವು ಮಾತ್ರ ಅವಳ ಕಡೆಗೇ ಇದ್ದಿತು. ಆ ನೋಟದಲ್ಲಿ ಯಾವ ಕಾಂತಿಯೂ ಇಲ್ಲ. ಕಣ್ಣು ಗುಡ್ಡೆಗಳು ಕೇವಲ ಗಾಜಿನ ಗುಡ್ಡೆಗಳಂತಿದ್ದವು. ಕುಮುದೆಯು ಶವದ ಮೇಲೆ ಬಿದ್ದು ಚಿಟ್ಟನೆ ಚೀರಿದಳು!

[೨]




ದರಪುರದ ಸುಪ್ರಸಿದ್ಧ ಶ್ರೀಮಂತರು ಸುಂದರ ಶರ್ಮರು. ಎಷ್ಟು ಶ್ರೀಮಂತರಿರಿದ್ದರೂ, ರಾಜರಿದ್ದರೂ ಅಥವಾ ಚಕ್ರವರ್ತಿಗಳಿದ್ದರೂ ಇಲ್ಲವೆ ತಿರಿದುಂಬುವ ಕಡು ಬಡವನಿದ್ದರೂ, ಅವುದಾದರೊಂದು ಕೊರತೆಯು ಇದ್ದೇ ಇರುವುದು ಸ್ವಾಭಾವಿಕ. ಅಂತಹ ಕೊರತೆಗಳಿಂದ ಪಾರಾದವನು ಆಕಾರಕ್ಕೆ ಮನುಷ್ಯನಾದರೂ, ವ್ಯಕ್ತಿತ್ವದಲ್ಲಿ ಅವನ ದರ್ಜೆಯು ಬೇರೆಯವಕ್ಕೆ ಹೋಲಿಸಲ್ಪಡುವುದು.

ಪ್ರಕೃತ ಸುಂದರ ಶರ್ಮರಿಗೆ ಇತರ ಯಾವ ತ್ರಿಬಾಧೆಗಳಿರದಿದ್ದರೂ ತಮಗೆಪುನ್ನಾಮ ನರಕವು ತಪ್ಪಲಿಲ್ಲವಲ್ಲ! ಎಂದು ಬಹಳ ದುಃಖಪಡುತ್ತಿದ್ದರು. ಕಡೆಗೆ ಅವರಿವರ ಹೇಳಿಕೆಗಳಿಂದಲೂ, ಪತ್ನಿಯ ಬಲವಂತದಿಂದಲೂ, ಅಂತರಂಗದ ಇಚ್ಛೆಯಿಂದಲೂ ಕೆಲವು ದೇವರುಗಳಿಗೆ ಮುಡುಪು ಕಟ್ಟಿಕೊಂಡರು. ಕೆಲವು ಯಾತ್ರೆಗಳನ್ನು ಮಾಡಿದರು. ಅಶ್ವತ್ಥ ಪ್ರದಕ್ಷಿಣೆಯೂ ಆಯಿತು. ಮಾರಿ, ಮಸಣಿ ಮೊದಲಾದ ಕ್ಷುದ್ರ ದೇವತೆಗಳಿಗೆ ಶಾಂತಿಯೂ ಆಯಿತು. ಅನಂತವ್ರತ ಮುಂತಾದ ಪೂಜೆ-ಪುರಸ್ಕಾರಗಳಂತೂ ಹೇಳತೀರದು. ಕಡೆಗೆ ಯಾವ ದೇವತೆಯ ಕರುಣೆಯಿಂದಲೋ ಒಂದು ಹೆಣ್ಣು ಜನನವಾಯಿತು. ಸುಂದರ ಶರ್ಮರಿಗೆ ಮುಕ್ಕಾಲುಭಾಗ ಮನೋಭಾರವು ಕಡಿಮೆಯಾಯಿತು. ಅಂತೂ ಸಂತಾನವಾಯಿತಲ್ಲಾ! ಅಷ್ಟೇ ಅನಂದ. ಪರಲೋಕ ಪ್ರಾಪ್ತಿಯು ಮರೆತು ಹೋಯಿತು. ಕನ್ಯಾದಾನ ಮಾಡಿ ಪುಣ್ಯಕಟ್ಟಿಕೊಳ್ಳಬಹುದೆಂದು ಸಮಾಧಾನಪಟ್ಟುಕೊಳ್ಳುತ್ತಿದ್ದರು. ಒಟ್ಟಿನ ಮೇಲೆ ಆಸ್ತಿಗೆ ಹಕ್ಕುದಾರರೊಬ್ಬರಾದರು!

ಶರ್ಮರಿಗೆ ಸುಮಾರು ನಲವತ್ತೈದು ವರ್ಷಗಳಿರಬಹುದು. ಅವರ ಧರ್ಮಪತ್ನಿಯವರಾದ ಮುರಾದೇವಿಯವರಿಗೆ ಮೂವತ್ತೈದು ಸುಮಾರಕ್ಕಿರಬಹುದು. ಅವರಿಬ್ಬರ ಆ ವಯಃಸ್ಸಿಗೆ ಮಗಳು ದಶಮವರ್ಷದವಳಾಗಿದ್ದಳು. ನಡೆದರೆಲ್ಲಿ ಸವೆಯುವಳೋ, ಎಂದು ಆ ಹುಡುಗಿಯನ್ನು ಆ ದಂಪತಿಗಳು ಬಹಳ ಶ್ರದ್ಧಾನುರಾಗಗಳಿಂದ ಬೆಳೆಸುತ್ತಿದ್ದರು.

ಮಧ್ಯಾಹ್ನ ಹನ್ನೆರಡು ಗಂಟೆಗಳ ಸಮಯ. ಶರ್ಮರು ಭುಕ್ತಾಯಾಸವನ್ನು ತೀರಿಸಿಕೊಳ್ಳುವುದರ ಸಲುವಾಗಿ ತಮ್ಮ ಏಕಾಂತ ಕೊಠಡಿಯಲ್ಲಿ ಸುಪ್ಪತ್ತಿಗೆಯ ಮೇಲೆ ಪವಡಿಸಿದ್ದರು; ಎಂದರೆ, ನಿದ್ರಾಂಗನೆಯ ಆಲಿಂಗನದಲ್ಲಿರಲಿಲ್ಲ. ಮುರಾದೇವಿಯವರು ತಾವು ಭುಜಿಸಿದ ತರುವಾಯ, ತಾಂಬೂಲದ ತಬಕವನ್ನು ಕೈಲಿ ಹಿಡಿದು ಮಂದಗಮನೆಯರಾಗಿ, ಶರ್ಮರಿದ್ದಲ್ಲಿಗೆ ಬಂದರು. ಪ್ರೇಮಪುತ್ರಿಯೊಂದು ಕಡೆ ನಿದ್ದೆಮಾಡುತ್ತಿದ್ದಳು. ದಂಪತಿಗಳು ತಾಂಬೂಲ ಚರ್ವಣವನ್ನು ಮಾಡುತ್ತ ಸರಸಾಲಾಪಗಳನ್ನಾಡಿಕೊಳ್ಳುತ್ತಿದ್ದರು. ಆ ಮಾತು, ಈ ಮಾತುಗಳ ನಡುವೆ ತಮ್ಮ ಮುದ್ದು ಮಗಳ ಮಾತೂ ಬಂದು, ಅದೂ ಬಹಳ ರಸವತ್ತಾಗಿ ನಡೆಯುತ್ತಿದ್ದಿತು.

ಮುರಾ:--'ಹುಡುಗಿಗಾಗಲೇ ಹತ್ತು ವರ್ಷಗಳು ತುಂಬಿಹೋದವು. ಹೆಂಗಳೆಯರೇನು ಬಹು ಬೇಗನೆ ಬೆಳೆದುಬಿಡುವರು.'

ಶರ್ಮ:—"ಸರಿ. ಮಗುವನ್ನು ಯಾರಿಗೆ ಕೊಡಬೇಕೆಂದು ನಿನಗಿಷ್ಟವಿದೆ?"

ಮುರಾ:-—"ತಾವೆಲ್ಲಿ ಕೊಡಬೇಕೆಂದರೆ, ಅಲ್ಲೇ ನನಗೂ ಇರಾದೆ."

ಶರ್ಮ:—“ಹಾಗಲ್ಲ. ನಿನ್ನ ಒಪ್ಪಿಗೆಯ ಮೇರೆಗೆ ಈ ವಿವಾಹವನ್ನು ಮಾಡಬೇಕೆಂದಿದ್ದೇನ.”

ಮುರಾ:—“ತಾವು ಅಬಲೆಯಾದ ನನ್ನ ಮೇಲೆ ಯಜ ಮಾನಿಕೆಯನ್ನು ಹೊರಿಸುವಂತೆ ತೋರುತ್ತದೆ. ಅಷ್ಟು ಉಚ್ಚ ಪದವಿಯು ನನಗೆ ಸಲ್ಲುವುದಲ್ಲ; ಅಲ್ಲದೆ ನಾನು ಆವಾಗಲಾ-ದರೂ ತಮಗೆ ಪ್ರತಿಹೇಳಿರುವೆನೆ?”

ಶರ್ಮ:—“ನೀನು ನನ್ನಂತಹ ಲಕ್ಷಾಧಿಕಾರಿಗೆ ಸತಿ ಯಾಗುವಂತೆ ದೇವರು ಹೇಗೆ ಕೂಡಿಸಿದನೋ ಕಾಣೆ.”

ಮುರಾ:—“ತಾವು ಅನ್ನುವುದೇನೋ ನನಗೆ ಗೊತ್ತಾಗು ವುದಿಲ್ಲ.”

ಶರ್ಮ:—“ನೀನು ಕೇವಲ ಹಳ್ಳಿಗಾಡಿನಲ್ಲಿ ಬೆಳೆದ ಸ್ತ್ರೀ. ಈಗಿನ ಕಾಲದ ನವನಾಗರೀಕತೆಯನ್ನು ಕಲಿಸಿದರೂ ನೀನು ಕಲಿತುಕೊಳ್ಳುವವಳಲ್ಲ. ಯಾವುದನ್ನು ಕೇಳಲಿ, ಯಾವುದು ಮಾಡಬೇಕೆನ್ನಲಿ ‘ನಿಮ್ಮಿಷ್ಟ’ ಎನ್ನುವ ಒಂದೇ ಒಂದು ಮಾತು ಅದಾವ ಮಹಾರಾಯರು ನಿನಗೆ ಹೇಳಿಕೊಟ್ಟರೋ ಕಾಣೆ! ನಾನೇನು ನಿನಗೆ ಯಾವ ಸ್ವಾತಂತ್ರ್ಯವನ್ನು ಕೊಟ್ಟಿರುವುದಿಲ್ಲ? ಹೇಳು, ನೋಡೋಣ?”

ಮುರಾ:—“ನಿಮ್ಮ ಶರೀರದಲ್ಲಿ ಅರ್ಧ ಭಾಗವು ನನ್ನದು. ಅದರಿಂದ ತಾವು ಮಾಡುವ ಸಕಲ ಕಾರ್ಯಕಲಾಪಗಳಿಗೂ ಆ ಭಾಗವು ಪಾಲುದಾರಿಯಾಗಿ ಇದ್ದೇ ಇರುತ್ತೆ. ಇನ್ನು, ಬಾಹ್ಯಕ್ಕೆ ಪ್ರತ್ಯೇಕಿಸಲ್ಪಟ್ಟ ನಾನು; ನನಗಾವ ಸ್ವಾತಂತ್ರ್ಯವಿಲ್ಲ? ಅಡಿಗೆ ಮಾಡುವ ಸ್ವಾತಂತ್ರ್ಯವುಂಟು. ಊಟ ಮಾಡುವ ಸ್ವಾತಂತ್ರ್ಯವುಂಟು. ಗೃಹಕೃತ್ಯಕ್ಕೆ ಬೇಕಾದ ಸಲಕರಣೆಗಳನ್ನು

ಕಡ್ಡಾಯವಾಗಿ ತಮಗೆ ಹೇಳಿ ತರಿಸಿಕೊಳ್ಳುವ ಸ್ವಾತಂತ್ರ್ಯ ವುಂಟು. ಇನ್ನು ಪರರು, ಸಾಲಕೊಟ್ಟವರು, ತಮ್ಮನ್ನು ನಿಷ್ಠುರ ವಾಗಿ ಕೇಳಬಹುದು. ನನ್ನನ್ನಾರೂ ಮಾತನಾಡಿಸರು. ಆಗಲೂ ನಾನು ಸ್ವತಂತ್ರಳು. ಒಂದು ವೇಳೆ ನೀವೇ ಒಬ್ಬರಿಗೆ ಬಾಕೀದಾರರಾಗಿ, ಅವರು ನಿಮ್ಮ ಮೇಲೆ ದಾವಾ ಮಾಡಿ ಜಪ್ತಿ ಯ ಬಗ್ಗೆ ಮನೆಗ ಬಂದರೆಂದಿಟ್ಟುಕೊಳ್ಳುವ. ತಾವು ಮನೆ ಯಲ್ಲಿರದಿದ್ದರೆ ನಾನು ಮೈ ಮೇಲೆ ರತ್ನಾಭರಣಗಳನ್ನು ಧರಿಸಿ, ರಾಶಿ, ರಾಶಿ ಹಣವನ್ನು ಗುಡ್ಡೆಹಾಕಿಕೊಂಡಿದ್ದರೂ ಅವರು ಬಂದು ತೆಗೆದುಕೊಂಡು ಹೋಗುವ ಹಾಗಿಲ್ಲ; ನನ್ನನ್ನು ಕೇಳು ವಂತೆ ಸಹ ಇಲ್ಲ. ಆಗಲೂ ನಾನು ಸ್ವತಂತ್ರಳು. ನನಗಿವ ಕ್ಕಿಂತಲೂ ಮತ್ತಾವ ಸ್ವಾತಂತ್ರ್ಯವು ಬೇಕು? ಮತ್ತ, ಗೌರವ ಗಳನ್ನು ತೊರೆದು, ಪುರುಷರಂತೆ ಗಂಡುಬೀರಿಯರಾಗಿ, ವಿಚಿತ್ರ ತರದ ನವೀನ ಉಡಿಗೆ-ತೊಡಿಗೆಗಳನ್ನು ತೊಟ್ಟು, ಪುರುಷರ ಜೊತೆಗಳಲ್ಲಿ ಕೈಕಲಿಸಿಕೊಂಡು ಕುಲುಕುತ್ತಾ, ಬೀದಿ, ಬೀದಿ ನಾಟಕ-ಚಲನಚಿತ್ರ ಮಂದಿರ, ಉದ್ಯಾನ ಮುಂತಾದುವುಗಳಲ್ಲಿ ವಿಹರಿಸುತ್ತಾ, ಸ್ವೇಚ್ಛಾನುವರ್ತನೆಯಿಂದ ಲಜ್ಜಾವಿಹೀನೆಯರಾದ ತರುಣಿಯರು ಕೇಳುತ್ತಿರುವ ಸ್ವಾತಂತ್ರ್ಯವು ನನಗೆಷ್ಟು ಮಾತ್ರ ಕ್ಕೂ ಬೇಡ. ಸಕಲ ಶಾಸ್ತ್ರಪುರಾಣಾದಿಗಳಲ್ಲಿಯೂ ಸಹ ಸ್ತ್ರೀಯರಿ ಗಿರುವ ಗೌರವಸ್ಥಾನವು ಮತ್ತಾರಿಗಿರುವುದು! ನಮ್ಮ ಭಾಷೆ, ನಮ್ಮ ನುಡಿ, ನಮ್ಮ ಪೂರ್ವಾಚಾರವನ್ನು ಮೂಲೆಗೊತ್ತಿಸಿ, ನಾಟಕದಲ್ಲಿನ ವೇಷಧಾರಿಗಳಂತೆ ಮುಖಗಳಿಗೆ ಬಣ್ಣಗಳನ್ನು ಹಚ್ಚಿಕೊಂಡು, ಹಿಂದೆ ಅರಿಯದ ಆಚರಿಸದ ರೀತಿ, ನೀತಿ ಗಳಿಂದ ವರ್ತಿಸುತ್ತಾ, ನಟರಂತೆ ನಟನೆಗೈಯುವ, ಪರಕೀಯರ

ಅನುಯಾಯಿಗಳಂತೆ ತೋರ್ಪಡಿಸಿಕೊಳ್ಳುತ್ತಾ, ಮಾನ್ಯ ಹಿಂದೂ ಸಾಂಪ್ರದಾಯವನ್ನು ಚಿತೆಗಿಟ್ಟು ಭಸ್ಮ ಮಾಡುವ ಸ್ವಾತಂತ್ರ್ಯವು ಬೇಕೇ? ಬೇಡ! ಬೇಡ!! ಖಂಡಿತವಾಗಿಯೂ ಆ ಬಗೆಯ ಸ್ವಾತಂತ್ರ್ಯವು ಬೇಡ!!!....."

ಶರ್ಮರು ನಡುವೇ ಬಾಯಿಹಾಕಿ: "ಒಳ್ಳೇ ವಾಚಾಳಿ ಕಣೆ ನೀನು. ಸಾಕು ನಿನ್ನ ಪಾಂಡಿತ್ಯ" ಎಂದು ಹೇಳಿ ಸ್ವಲ್ಪ ನಕ್ಕರು. ಮುರಾದೇವಿಯೂ ಅದನ್ನನುಕರಿಸಿದಳು. ಅನಂತರ ಶರ್ಮರು ಮಾತನಾಡತೊಡಗಿದರು:

"ಹಾಗಾದರೆ ಕೇಳು ನಾನು ಯೋಚಿಸಿರುವುದನ್ನು. ನಮಗೆ ಗಂಡುಮಕ್ಕಳಿಲ್ಲ. ಇರುವಳೆಂದರೆ ಕೇವಲ ಮಗಳು. ಮದುವೆಯಾಗಿ ಅತ್ತೇ ಮನೆಗೆ ಹೋದರೆ; ಆ ಮೇಲೆ?"

ಮುರಾ:—"ಆ ಮೇಲೆ?"

ಶರ್ಮ:—"ಆದುದರಿಂದ ಮದುವೆಯಾದರೂ ಮಗಳು ನಮ್ಮ ಮನೆಯಲ್ಲಿಯೇ, ನಮ್ಮ ಕಣ್ಣೆದುರಿನಲ್ಲಿಯೇ ಇರಬೇಕು. ಹಾಗೆ!"

ಮುರಾ:—"ಹಾಗೆ?"

ಶರ್ಮ:-"ಅಂತಹ ಅಳಿಯನನ್ನು ಆರಿಸಬೇಕು ನೋಡು! ನಮಗೇನು ಆಸ್ತಿವಂತನಾಗಿರದಿದ್ದರೂ ಚಿಂತೆಯಿಲ್ಲ. ತಂದೆ-ತಾಯಿಗಳಿದ್ದರೂ, ಇಲ್ಲದಿದ್ದರೂ ಚಿಂತೆಯಿಲ್ಲ. ಅಕ್ಕ-ತಂಗಿಯರಿಲ್ಲದಿದ್ದರೂ ಚಿಂತೆಯಿಲ್ಲ. ವಿಶೇಷ ಬುದ್ಧಿವಂತನಾಗಿರದಿದ್ದರೂ ಚಿಂತೆಯಿಲ್ಲ. ಏನು, ಮುರಾ, ನಿನಗೆ ಸಮಾಧಾನವೋ?"

ಮುರಾ:—"ಚಿಂತೆಯಿಲ್ಲ."

ಶರ್ಮ (ಕೃತ್ರಿಮ ಕೋಪದಿಂದ):—"ಸರಿ, ಸರಿ, ನಿನಗೆ

ಲ್ಲವೂ ಹಾಸ್ಯವಾಗಿದೆ. ನಾನು ತಮಾಷೆಗಾಗಿ ಹೇಳುತ್ತಿದ್ದೆ ನೆಂತಲೊ?"

ಮುರಾ:—"ಇಲ್ಲ, ಇಲ್ಲ! ನಾನೂ ವಿನೋದಕ್ಕಾಗಿ ಕೇಳು ತ್ತಿಲ್ಲ. ನನಗೂ ಅರ್ಥವಾಯಿತು. ತಂದೆ-ತಾಯಿ, ಬಂಧು ಗಳಿದ್ದು, ಹೆಚ್ಚು ಹಣವಂತನಾಗಿ, ವಿದ್ಯಾಸಂಪನ್ನನಾದ ವರನು ನಮ್ಮ ಮನೆಯಲ್ಲಿರಲು ಒಪ್ಪುವುದಿಲ್ಲವೆಂಬ ಅರ್ಥವು ನನಗೂ ಆಯಿತು. ಚಿಂತೆಯಿಲ್ಲ, ಆ ಮೇಲೆ?"

ಶರ್ಮ:—"ಅದೂ ಅಲ್ಲದೆ ಅಂತಹ ವರನು ಸಿಕ್ಕಿದರೆ ನಮ್ಮ ಆಜ್ಞಾನುಸಾರ ನಮ್ಮಲ್ಲಿಯೇ ಇರುತ್ತಾನೆ. ನಾವು ಹೇಳಿ ದಂತೆ ಕೇಳುತ್ತಾನೆ. ಮಗನಂತೆ ನಮ್ಮಲ್ಲಿ ಪ್ರಕಾಶಿಸುತ್ತಾನೆ. ಬಡವನನ್ನು ಉದ್ಧಾರಮಾಡಿದ ಪುಣ್ಯವು ಇಹ-ಪರಗಳಲ್ಲಿ ಒದಗುತ್ತದೆ. ಇನ್ನು ಜನರು ಆಡಿಕೊಳ್ಳುವರು. 'ವರದಕ್ಷಿಣೆ ಕೊಡಬೇಕಾಗುವದೆಂಬ ಭಯದಿಂದಲೂ, ಬೀಗರು ಹೆಚ್ಚು ಜನ ರಾದರೆ ತಕ್ಕ ಮನ್ನಣೆ ಮಾಡಲು ಅಧಿಕ ದ್ರವ್ಯ ವೆಚ್ಚವಾಗುವು ದೆಂತಲೂ ಭಾವಿಸಿ, ಯಾವನೋ ಒಬ್ಬ ಅನಾಮಧೇಯನಿಗೆ ಕೊಟ್ಟು ಲಗ್ನ ಮಾಡಿದನೆ'ಂದು ಕೊಳ್ಳುವರು. 'ವಿಶ್ವವನ್ನು ಮೆಚ್ಚಿಸಲು ವಿಶ್ವೇಶ್ವರನಿಂದಲೂ ಆಗದು' ಎಂದ ಮೇಲೆ, ಆ ಮಾತುಗಳಿಗೆ ಸೊಪ್ಪು ಹಾಕದೆ, ಮಾಡತಕ್ಕ ಸತ್ಕಾರ್ಯವನ್ನು ಮಾಡದಿರಬಾರದೆಂದು ನನ್ನ ಉದ್ದೇಶ್ಯ"

ಮುರಾ:—"ನನ್ನ ಉದ್ದೇಶ್ಯವೂ ಒಂದುಂಟು."

ಶರ್ಮ:—"ಊ, ಹಾಗೆ ದಾರಿಗೆ ಬಾ. ಅದಕ್ಕೇ ಇಷ್ಟು ಹೊತ್ತಿನಿಂದಲೂ ನಿನ್ನನ್ನು ಕೇಳಿದುದು."

ಮುರಾ:—"ಸಾವಿರಗಟ್ಟಲೆ ವರದಕ್ಷಿಣೆ ಕೊಡುವುದು

ಹೇಗಿದ್ದರೂ ತಪ್ಪುವುದು. ಆ ಹಣದಿಂದ ನಮ್ಮ ಮಗಳ ಮದುವೆಯಲ್ಲಿ ನಮ್ಮೂರಿನ ಜನರೆಲ್ಲರಿಗೂ ಸಂತರ್ಪಣೆಯನ್ನು ಮಾಡಿಸುವಿರೋ?''

ಶರ್ಮ:—'' ಇಷ್ಟೇನೆ?''

ಮುರಾ:—''ಅಷ್ಟೆ!''

[೩]



ಬೆಳಗಿನ ಏಳು ಗಂಟೆಗಳ ಸಮಯ. ಪ್ರಮೋದ ಕುಮಾರನು ತನ್ನ ಕೊಠಡಿಯಲ್ಲಿ ಕುರ್ಚಾಸನದ ಮೇಲೆ ಕುಳಿತು ಪುಸ್ತಕ ಒಂದರ ಅವಲೋಕನದಲ್ಲಿದ್ದನು. ಆತನ ವಯಸ್ಸು ಸುಮಾರು ಹದಿನೆಂಟಕ್ಕೆ ದಾಟಿರಬಹುದು. ತಲೆಯು ವಾರೆ ಬೈತಲೆಯಿಂದ ಕೂಡಿದ್ದಿತು. ಬಾಚಿದ ತುಂಡು-ತುಂಡಾದ ಕೂದಲುಗಳು ತೈಲ ಲೇಪಿತಗಳಾಗಿ, ಪ್ರಮಾಣಕ್ಕೆ ತಕ್ಕಷ್ಟು ತುಂಡಾಗಿಯೂ, ಉದ್ದವಾಗಿಯೂ, ಗುಂಗುರು-ಗುಂಗುರಾಗಿಯೂ ಒಪ್ಪುತ್ತಿದ್ದಿತು. ಮುಖವು ದುಂಡಾಗಿ ನಸುಗೆಂಪಾಗಿದ್ದಿತು. ಒಂದು ಪಟ್ಟೆಯನ್ನು ಸುತ್ತಿ, ಷರಟೊಂದನ್ನು ಹಾಕಿಕೊಂಡಿದ್ದನು. ಭುಜದ ಮೇಲೊಂದು ಶುಭ್ರವಸ್ತ್ರವು ಭೂಷಿತವಾಗಿದ್ದಿತು. ಒತ್ತಟ್ಟಿಗೆ ಆರಾಮು ಕುರ್ಚಿಯೊಂದಿತ್ತು. ಆ ಕೊಠಡಿಯಲ್ಲಿ ಅನ್ಯರಾರೂ ಇರದ್ದರಿಂದ ನಿಶ್ಶಬ್ದವಾಗಿದ್ದಿತು. ಕೇವಲ ಶಬ್ದವೆಂದರೆ, ವೇದಿಕೆಯ ಮೇಲಿದ್ದ ವೇಳಾಸೂಚಿಯ ''ಟಿಕ್ ಟಿಕ್'' ಎಂಬುದು ಮಾತ್ರವೆ. ಬೀರು ಒಂದರಲ್ಲಿ ಕೆಲವು ಪುಸ್ತುಕಗಳು ಅಂತಸ್ತಿನಿಂದ ಕೂಡಿ, ಸಾಲು--ಸಾಲಾಗಿರಿಸಲ್ಪ

ಟ್ಟಿದ್ದುವು. ಮತ್ತೊಂದು ಕಡೆ ಗೋಡೆಯ ಮೇಲೆ ಅಮೂಲ್ಯ ವಾದ ಮತ್ತು ಸಾಮಾನ್ಯವಾದ ಉಡುಪುಗಳು ಇಳಿಬಿದ್ದಿದ್ದುವು. ಮತ್ತೆ ಕೆಲವೆಡೆಗಳಲ್ಲಿ ಯಂತ್ರನಿರ್ಮಿತ ಚಿತ್ರಪಟಗಳು ಕಂಗೊಳಿ ಸುತ್ತಿದ್ದುವು. ಪ್ರಮೋದನು ಗಂಭೀರಮನಸ್ಕನಾಗಿ ಪುಸ್ತಕ ದಲ್ಲಿನ ವಿಷಯಗಳನ್ನು ಗ್ರಹಣಮಾಡಿಕೊಳ್ಳುತ್ತಿದ್ದನು. ಆಗ ಆ ಕೊಠಡಿಯ ಹೊರಬಾಗಿಲ ಕಡೆ ಆರೋ: "ಪ್ರಮೋದಕುಮಾ ರರೆ" ಎಂದು ಕೂಗಿದ ಹಾಗಾಯಿತು. ಯುವಕನ ಓದುವಿಕೆಗೆ ಭಂಗವುಂಟಾದುದರಿಂದ, ಒಡನೆಯೇ ದಿಗ್ಗನೆದ್ದು ಅವಲೋಕನ ದಲ್ಲಿದ್ದ ಭಾಗಕ್ಕೆ ತನ್ನ ತರ್ಜನೀ ಬೆರಳನ್ನಿಟ್ಟು, ಪುಸ್ತಕವನ್ನು ಮುಚ್ಚಿ ಹಿಡಿದುಕೊಂಡು, ವಿನಯವಾಣಿಯಿಂದ:--'ಯಾರದು?' ಎಂದು ಹೇಳುತ್ತಾ ಬಾಗಿಲ ಸಮೀಪಕ್ಕೆ ಹೋಗಿ, ಕದವನ್ನು ತೆರೆ ದನು. ಸುಮಾರು ನಾಲ್ವತ್ತೈದು ವಯಸ್ಸಿನ ಪುರುಷನೊಬ್ಬನು ದೃಗ್ಗೋಚರವಾದನು. ಆಗಂತುಕನು ಯುವಕನನ್ನು ನೋಡು ತ್ತಲೇ: "ತಾವೇಯೋ, ಪ್ರಮೋದಕುಮಾರರು?" ಎಂದು ನಮ್ರ ವಾಗಿ ಕೇಳಿದನು. ಯುವಕನು ಸಾದರದಿಂದ: "ಅಹುದು. ತಮ್ಮ ಗುರುತು ನನಗಿಲ್ಲ. ತಾವಾರು?" ಎಂದನು. ಪುರುಷನು: "ತಮ್ಮ ಗುರುತೂ ನನಗಿಲ್ಲ. ವಿಚಾರಿಸಿ ತಿಳಿದೆನು" ಎಂದು ಹೇಳುತ್ತಿದ್ದಂತೆಯೇ ಪ್ರಮೋದನು: "ಸಂತೋಷ. ಒಳಗೆ ಬನ್ನಿ" ಎಂದು ಹೇಳುತ್ತಾ, ಯುವಾಪುರುಷನನ್ನು ಕರೆದುಕೊಂಡು ಹೋಗಿ ಪ್ರತ್ಯೇಕವಾದ ಆರಾಮ ಕುರ್ಚಿಯೊಂದರಲ್ಲಿ ಕೂರಿಸಿ ದನು. ಅನಂತರ ಪ್ರಮೋದನು ತಾನೂ ಕುಳಿತು: "ನನ್ನಿಂದ ತಮಗೇನಾಗಬೇಕು?" ಎಂದು ಪ್ರಶ್ನಿಸಿದನು.

ಆಗಂತುಕ:—'ಒಂದು ದೊಡ್ಡ ಉಪಕಾರವಾಗಬೇಕು.'

ಪ್ರಮೋದ:—"ಅದಾವುದೋ ಹೇಳೋಣಾಗಲಿ. ಸಾಧ್ಯವಾದುದಾದರೆ ಮಾಡಿ ಕೊಡುವೆನು."

ಆಗಂತುಕ:—"ತಮಗೆ ತಾಯಿ-ತಂದೆಗಳಿಲ್ಲವೆಂದು ಕೇಳಿದ್ದೇನೆ."

ಪ್ರಮೋದನಾಗ ಕೊಂಚ ವಿಚಾರಪರನಾಗಿ: "ಈ ಮನುಷ್ಯರ ಮಾತುಗಳೇನೋ ಒಂದು ಬಗೆಯವಾಗಿವೆ. ನನ್ನಿಂದ ಕಾರ್ಯಾಪೇಕ್ಷಿಗಳಾಗಿ ಬಂದಿರುವ ಇವರಿಗೆ ಗೃಹಕೃತ್ಯದ ಗೊಡವೆಯೇಕೆ? ಇರಲಿ. ವಿಷಯವೇನೊ ಹೊರಪಟ್ಟಾಗ ತಿಳಿಯುವುದು" ಎಂದು ತರ್ಕಿಸುತ್ತಾ, ಪ್ರಶಾಂತನಾಗಿ—

"ಅಹುದು. ಇಬ್ಬರೂ ಇಲ್ಲ."

"ತಮಗೆ ಮತ್ತಾವ ಸಮೀಪ ಬಂಧುಗಳೂ ಇಲ್ಲವೆಂದು ತಿಳಿಯುತ್ತೇನೆ."

"ನಿಜ."

"ಹಿಂದೆ ತಮ್ಮ ತಂದೆಯವರು ಸರ್ಕಾರದಲ್ಲಿಡಲ್ಪಟ್ಟಿದ್ದ ಹಣದ ಬಡ್ಡಿಯಿಂದ ಜೀವನೋಪಾಯವೂ ಮತ್ತು ವಿದ್ಯಾವ್ಯಾಸಂಗವೂ ನಡೆಯುತ್ತಿರುವುದೆಂಬುದಾಗಿ ಕೇಳಿದೆನು."

"ಅಹುದು."

"ಬಹಳ ಸಂತೋಷ. ಪೂರ್ವಿಕರು ಸಂಪಾದಿಸಿದುದನ್ನು ದುರ್ವಿನಿಯೋಗಪಡಿಸದೆ, ಈ ರೀತಿ ಸದ್ವಿನಿಯೋಗಪಡಿಸುತ್ತಿರುವ ನಿಮ್ಮನ್ನು ಈ ನವಯುಗದಲ್ಲಿ ಕಂಡು ಆಶ್ಚರ್ಯವಾಗುತ್ತದೆ."

"ನನ್ನ ಬಾಲ್ಯದಲ್ಲಿ ಆ ಹಣವು ನನ್ನ ಕೈ ಸೇರಿದ್ದರೆ ಏನಾಗುತ್ತಿದ್ದಿತೋ ಹೇಳಲಾರೆ. ಅದು ನನ್ನ ಇಪ್ಪತ್ತೆರಡನೆಯ ವಯಸ್ಸಿನ ವರೆಗೂ ದಕ್ಕಕೂಡದೆಂದು ನಮ್ಮ ತಂದೆಗಳು ಸರ್ಕಾ

ರಕ್ಕೆ ತಿಳಿಸಿ ಮೃತರಾಗಿದ್ದಾರೆ. ಇರಲಿ. ತಾವು ಬಂದುದೇತಕ್ಕೋ ತಿಳುಹಿಸಿದರೆ, ಅದನ್ನು ಮಾಡಿ ಕೊಟ್ಟು ನಾನು ಪಾಠಶಾಲೆಗೆ ಹೊರಡುವೆನು."

"ನನ್ನದು ಸುಂದರಪುರ. ಹೆಸರು ಸುಂದರಶರ್ಮ....."

ಪ್ರಮೋದನಾಗ ನಡುವೇ ಬಾಯಿ ಹಾಕಿ: "ಓ ಹೋ, ತಾವೇಯೋ ಶ್ರೀಮಂತ ಸುಂದರಶರ್ಮರು! ತಮ್ಮ ಹೆಸರು ಮಾತ್ರ ಕೇಳಿದ್ದೆನು; ನೋಡಿರಲಿಲ್ಲ."

"ಈಗ ಅದೂ ಆಯಿತಲ್ಲ; ಆದರೆ...."

"ಏನು, ಅಷ್ಟಕ್ಕೇ ನಿಲ್ಲಿಸಿದಿರಿ? ಧನಿಕರಾದ ತಮಗೆ ನನ್ನಿಂದೇನು ಕೆಲಸ ಸ್ವಾಮಿ?"

"ನನ್ನ ಮನೆಯನ್ನೂ, ವಂಶವನ್ನೂ ಉದ್ಧರಿಸಬೇಕು."

"ತಮ್ಮ ಭಾವಗರ್ಭಿತವಾದ ಮಾತುಗಳು ನನಗರ್ಥವಾಗುವುದಿಲ್ಲ. ಬಿಚ್ಚಿ ಹೇಳಿಬಿಡಿ. ಮರೆ ಏತಕ್ಕೆ?"

"ನನ್ನ ಆಸ್ತಿಯ ವಿಚಾರ ನಿಮಗೆ ಗೊತ್ತೇ ಇರುವುದಲ್ಲಾ? ಒಬ್ಬ ಲಕ್ಷಣವಾದ ಮಗಳಿರುವಳು. ನಾನು ಬಂದಿರುವುದು ವರಾನ್ವೇಷಣಕ್ಕಾಗಿ!"

"ನನ್ನಲ್ಲಿ ಬಂದಿರುವುದಾವುದಕ್ಕೆ?"

"ವಧುವಿಗೆ ವರರಾಗಿರೆಂದು ತಮ್ಮನ್ನು ಕೇಳಿಕೊಳ್ಳುವುದಕ್ಕೆ?"

"ಏನು! ನನಗಾಗಲೇ ಮದುವೆಯೆ?"

"ಅದೇತಕ್ಕೆ ಅಷ್ಟು ಕೌತುಕ?"

"ನಾನಿನ್ನೂ ಓದಬೇಕಾದುದು ಬಹಳವಿದೆ."

"ಮದುವೆಯಾದ ಮೇಲೆ ಅದಕ್ಕೇನಭ್ಯಂತರ?"

‘‘ಆಗ ಮನಸ್ಸಿನ ಮೇಲೆ ಯಾವ ರೀತಿ ಪರಿಣಾಮವಾಗುತ್ತದೆಯೋ?”

‘‘ಬುದ್ಧಿವಂತರು ಮನಸ್ಸೆಂಬ ಕುದುರೆಯ ಲಗಾಮನ್ನು ತಮ್ಮ ಹಿಡಿಕೆಯಲ್ಲಿಟ್ಟುಕೊಳ್ಳುವರೆಂದು ತಿಳಿದಿದ್ದೇನೆ.’’

‘‘ಎಷ್ಟು ಹಿಡಿದಿದ್ದರೂ ಗುಡ್ಡಗಾಡು ಪ್ರದೇಶದಲ್ಲಿ ಮುಗ್ಗರಿಸಿದಾಗ ಯತ್ನವೇ ಇಲ್ಲ.’’

‘‘ಮನುಷ್ಯನ ಪ್ರಯತ್ನದ ಮೇಲೆ ಭಗವಂತನ ದಯೆಯೂ ಒಂದುಂಟೆಂದು ಭಾವಿಸಬೇಕು. ಎಲ್ಲರ ಕಷ್ಟ-ಸುಖಗಳನ್ನು ನೋಡಿಕೊಳ್ಳುವವನು ಆತನೆ. ಆತನೇ ಆ ಕಾಲಕ್ಕೆ ಅದನ್ನೂ ನಿವಾರಣೆ ಮಾಡಬಹುದು.’’

‘‘ಹೇಗೂ ಆಗಬಹುದೆಂದು ಹೇಳಿಬಿಡುತ್ತಿದ್ದೆ. ನೀವೋ ಶ್ರೀಮಂತರು. ಸದ್ಯಕ್ಕೆ ನನ್ನ ದ್ರವ್ಯವು ನನ್ನ ಕೈಸೇರುವ ವರೆಗೂ ನಾನು ಬಡವನೇ. ಲಗ್ನದ ಖರ್ಚಿಗೂ ಸಹ ಸದ್ಯಕ್ಕೆ ನನಗೆ ಮಾರ್ಗವಿಲ್ಲ.’’

‘‘ಓ! ಹೋ!! ಆ ವಿಚಾರವಾಗಿ ಯೋಚಿಸುವಿರೋ? ಮೊದಲೇ ಅದನ್ನು ಪರಿಹಾರ ಮಾಡಬೇಕಾಗಿದ್ದಿತು. ಮಾತಿನ ಭರದಲ್ಲಿ ಮರೆತು ಹೋಯಿತು. ಆ ವಿಷಯವಾಗಿ ನೀವು ಯೋಚಿಸಲೇ ಕೂಡದು. ಒಂದು ಚಿಕ್ಕ ಕಾಸನ್ನೂ ಸಹ ಲಗ್ನಕ್ಕಾಗಿ ನೀವು ವೆಚ್ಚ ಮಾಡಬೇಕಾಗಿಲ್ಲ. ಸಾಲಂಕೃತ ಕನ್ಯಾದಾನ ಮಾಡಬೇಕೆಂದಿರುವೆನು.’’

‘‘ಅದೇನು? ಸರಿಯಾದ ಜೋಡಿಯಲ್ಲದ ನನ್ನನ್ನು ಇಷ್ಟು ಒತ್ತಾಯಪಡಿಸಿ ಕೇಳುತ್ತೀರಿ? ಮತ್ತಾರೂ ತಮಗೆ ಸಾಟಿಯಾದವರಿಲ್ಲವೆ?’’

“ಇಂತಹರೇ ಸರಿಯಾದ ಸಾಟಿಯವರೆಂದು ಮನಸ್ಸಿನಲ್ಲಿ ಯೋಚಿಸಿ, ನಿರ್ಧರಿಸಿಯೇ ನಿಮ್ಮನ್ನು ಕೇಳುತ್ತಿರುವುದು.”

“ಲಗ್ನವು ಯಾವಾಗಲೆಂದು ಗೊತ್ತು ಮಾಡಿರುವುದು?”

“ನಾಳೆ ಮಾಘ ಬಹುಳ ೫ ಗುರುವಾರ ಪ್ರಶಸ್ತವಿದೆ.”

“ಇನ್ನು ಹದಿನೈದು ದಿನಗಳಲ್ಲಿಯೇ?”

“ಹೌದು.”

“ಆಗಲಿ. ದೇವರಿದ್ದಾನೆ ನೋಡುವ.”

“ನಿಮ್ಮ ಮನಸ್ಸಿನ ಸಂಶಯವೇನೋ ಅರುಹುವಿರಾದರೆ ಸಮಾಧಾನಿಸುವೆನು.”

“ಹುಡುಗಿಯ...............”

ಎಂದು ಹೇಳುತ್ತಿರುವಂತೆಯೇ “ಪ್ರಮೋದ” ಎಂದು ಸಂಬೋಧಿಸುತ್ತಾ ಗೆಳೆಯನೋರ್ವನು ಅಲ್ಲಿಗೆ ಬಂದನು.

ಪ್ರಮೋದ:—“ಬಾ, ಶಂಕರ್. ಏನು ಅಪರೂಪವಾಗಿಬಿಟ್ಟೆ? ನನ್ನ ಕೊಠಡಿಗೇ ಬರುವುದಿಲ್ಲವಲ್ಲ?”

ಶಂಕರ್:-“ಅದೇನಯ್ಯಾ ಹಾಗೆ ಹೇಳುವಿ? ನೋಡೀ....” ಎಂದು ಸುಂದರ ಶರ್ಮರ ಕಡೆ ತಿರುಗಿ: “ಅ....ಅ....ಅಂದಹಾಗೆ ಇದೇನು ಸ್ವಾಮಿ, ತಮ್ಮ ಸವಾರಿ ಇಲ್ಲಿಗೆ ದಯಮಾಡಿಸೋಣವಾಗಿದೆ?....ನನ್ನ ಮಾತೆಲ್ಲಿಯೋ? ಜ್ಞಾನವೆಲ್ಲಿಯೋ? ತಮ್ಮನ್ನು ನೋಡುತ್ತಲೇ ಇದ್ದೇನೆ. ತಾವಿಲ್ಲಿಗೆ ಹೇಗೆ ಬಂದಿರೆಂದು ವಿಚಾರಿಸಲೇ ಇಲ್ಲವಲ್ಲಾ?”

ಸುಂದರ:—“ಆಗಲಪ್ಪಾ, ಅಷ್ಟಾದರೂ ಅಭಿಮಾನವಿದೆಯಲ್ಲಾ.”

ಪ್ರಮೋದ:—ಶಂಕರ್, ಇವರು ನಿನಗೆ ಗುರುತೆ?

ಶಂಕರ್:—'ಹೀಗಿದ್ದೇನೆ ಸ್ವಾಮಿ.' "ಏನು ಪ್ರಮೋದ? ಇವರು ಗುರುತೇ? ಎಂದು ಕೇಳಿದೆಯಾ? ನಿನಗಿಲ್ಲವೆ ಈ ಶ್ರೀಮಂತರ ಪರಿಚಯ? ಬಹಳ ದೊಡ್ಡ ಮನುಷ್ಯರು. ಗುಣವೂ ದೊಡ್ಡದು. 'ತುಂಬಿದ ಕೊಡ ತುಳುಕುವುದಿಲ್ಲ' ವೆಂದು ಹೇಳುತ್ತಾ........"

ನಡುವೆ ಶರ್ಮರು ಬಾಯಿಹಾಕಿ: "ಏನು ಹೊಗಳುವುದಕ್ಕೆ ಮೊದಲಿಟ್ಟೆಯಲ್ಲವಪ್ಪಾ?"

ಶಂಕರ್:—"ಇದರಲ್ಲಿ ಮಿಥ್ಯವೇನಿದೆ ಸ್ವಾಮಿ? ಇದ್ದದ್ದನ್ನು ಹೇಳಿದೆ. ಅಂದಹಾಗೆಯೇ ತಮ್ಮ ಮಗಳ ಲ....ಅ....ಉ....ಉ....ಲಗ್ನ ವಿಚಾರವಾಗಿ ಮೊನ್ನೆ ವಾದ-ವಿವಾದಗಳು ನಡೆಯುತ್ತಿದ್ದುವು. ಏನು ತೀರ್ಮಾನಿಸಿರುವಿರಿ?"

ಶರ್ಮ:—"ಅದರ ತೀರ್ಮಾನದ ಸಲುವಾಗಿಯೇ ಇಲ್ಲಿಗೆ ಬಂದಿದ್ದೆನು."

ಶಂಕರ್:-"ಏನು, ಪ್ರಮೋದನಿಗೆ ಕೊಡುವಿರಾ? ಅಬ್ಬಾ! ಲೋ, ಏನು ಭಾಗ್ಯಶಾಲಿಯೋ ನೀನು? ಹುಂ....ಆಗಲಿ. 'ಶುಭಸ್ಯ ಶೀಘ್ರಂ.' ಯಾವಾಗಯ್ಯಾ ಪ್ರಮೋದ ಹೋಳಿಗೆ ಹಾಕುವುದು?"

ಪ್ರಮೋದ:—"ಏನು, ಶಂಕರ್, ಆಗಲೇ ತೀರ್ಮಾನಿಸಿದೆಯಾ?"

ಶಂಕರ್:—"ಇನ್ನೂ ಅನುಮಾನವೇ? ನೀನು ಒಪ್ಪಿರಲಿಲ್ಲವೇನು? ಅಯ್ಯೋ ಹುಚ್ಚಾ! ತಾನಾಗಿ ಬಂದ ಲಕ್ಷ್ಮಿಯನ್ನು ದೂಡುವುದೇ? ಚೆನ್ನಾಯಿತು!"

ಪ್ರಮೋದ:—"ಅಲ್ಲವಯ್ಯಾ...."

ಶಂಕರ್:—"ಅದೇನು, ಅಷ್ಟಕ್ಕೇ ನಿಂತುಬಿಟ್ಟೆ?"

ಪ್ರಮೋದ:—“ಏನೋ, ಹಿಂದೆ ಹೇಳಬೇಕೆಂದಿದ್ದೆ. ಆ ಕಾಲಕ್ಕೆ ನೀನೂ ಬಂದೆ.”

ಶಂಕರ್:-“ನಾನು ಬರಬಾರದಾಗಿದ್ದಿತೇನಪ್ಪಾ? ಹೋಗುತ್ತೇನೆ ಬಿಡಯ್ಯ....”

ಪ್ರಮೋದ:—“ಅಲ್ಲಾ ಶಂಕರ್, ಬಂದುದೊಳ್ಳೆಯದೇ ಆಯಿತು. ಹೇಳುತ್ತೇನೆ ತಾಳು, ನೆನಪು ಮಾಡಿಕೊಂಡು.”

ಶಂಕರ್:—“ನೆನಪೂ ಬೇಡ ಗಿನಪೂ ಬೇಡ. ಬಹಳ ಸುಂದರಳಾದ ಹುಡುಗಿ....”

ಪ್ರಮೋದ:—“ಉ....ಉ....ಅದೆ. ಅದನ್ನೇ. ನೀನೇ ನೆನಪು ಮಾಡಿಕೊಟ್ಟೆ” ಎಂದು ಲಜ್ಜಿತನಾಗಿ ಹೇಳಿದನು.

ಶರ್ಮರು:—“ಓ, ಹೋ, ಅಷ್ಟು ತಾನೇ? ನೋಡೋಣಾಗಲಿ.” ಎಂದು ಕಿಸೆಯಿಂದ ಒಂದು ಚಿತ್ರಪಟವನ್ನು ತೆಗೆದು ಪ್ರಮೋದನ ಕೈಗೆ ಕೊಟ್ಟರು.

ಪ್ರಮೋದನು ನೋಡಿದನು. ಸಂಜೆಯ ಕುಸುಮದಂತೆ ಅವನ ಮುಖವು ಅರಳಿತು!

## [೪]




ದರ ಶರ್ಮರ ಮನೆಯ ಮುಂಭಾಗವು ನಿಡಿದಾದ ಹಸರು ಚಪ್ಪರದಿಂದ ಶೋಭಿಸುತ್ತಿದ್ದಿತು. ಚಪ್ಪರಕ್ಕಾಧಾರವಾಗಿ ನಿಲ್ಲಿಸಿದ್ದ ಕಂಬಗಳು, ಕೆಂಪು, ಬಿಳುಪಿನ ವಸನಗಳಿಂದ ಸುತ್ತಲ್ಪಟ್ಟು, ಅವುಗಳ ಮೇಲೆ ಪತಾಕೆಗಳು ಹಾರಾಡುತ್ತಿದ್ದುವು. ಚಪ್ಪರದ ಒಳಭಾಗವು ಶುಭ್ರ, ಶ್ವೇತ

ವಸನದಿಂದಾಚ್ಛಾಧಿಸಲ್ಪಟ್ಟಿದ್ದಿತು. ಅಲ್ಲಲ್ಲಿ ವಿಚಿತ್ರವಾದ ಬಳ್ಳಿಯ ವರಸೆಗಳೂ, ಕಮಲ ಪುಷ್ಪಗಳೂ ತರತರದ ಬಣ್ಣದ ಕಾಗದ ಗಳಿಂದ ನಿರ್ಮಿತವಾಗಿದ್ದುವು. ಅವುಗಳ ಮಧ್ಯೆ ದೊಡ್ಡ ಪುಟ್ಟ ರಸದ ಗುಂಡುಗಳೂ, ಗಿಲೀಟಿನ ಮುತ್ತಿನ ಸರಗಳೂ ತೂಗ ಹಾಕಿದ್ದುವು. ಸೌಧದ ಎಡ-ಬಲ ಪಾರ್ಶ್ವಗಳಲ್ಲಿಯೂ, ಮುಂಭಾ ಗದಲ್ಲಿಯೂ, ಮರೆಮಾಡಿದ್ದ ತಡಿಕೆಗಳು ಕೃತಕ ಗೋಡೆ ಗಳಂತೆ ಭಾಸವಾಗುತ್ತಿದ್ದುವು. ಅಲ್ಲದೆ ಆ ಮೂರು ಕಡೆಗಳ ಲ್ಲಿಯೂ ಹೋಗಿಬರುವವರಿಗೆ ದ್ವಾರಗಳೇರ್ಪಟ್ಟಿದ್ದುವು. ಆ ಮಾರ್ಗಗಳ ಉಭಯ ಪಾರ್ಶ್ವಗಳಲ್ಲಿಯೂ ಉನ್ನತವಾದ ಕದಳೀ ವೃಕ್ಷಗಳು ಕಟ್ಟಲ್ಪಟ್ಟಿದ್ದುವು. ಅಲ್ಲದೆ ಆ ದಾರಿಗಳ ಮೇಲ್ಭಾ ಗವು ಅರ್ಧಚಂದ್ರಾಕಾರವಾಗಿ, ಹಸರು ರೇಶಿಮೆಯ ಚುಂಗು ಗಳಿಂದ ನೇತ್ರಾನಂದಕರವಾಗಿದ್ದಿತು. ಆ ಚುಂಗುಗಳ ಕೆಳ ಭಾಗವು ಕಸೂತಿಯ ಮೆರುಗಿನಿಂದ ಮನೋರಂಜಕವಾಗಿದ್ದಿತು. ಕಮಾನಿನ ಮೇಲ್ಭಾಗವು ಕೆಂಪು ಮಕಮಲ್ಲಿನಿಂದ ಮುಚ್ಚಲ್ಪಟ್ಟು, ಅದರ ಮೇಲೆ ಸುಖಾಗಮನವನ್ನು ಸೂಚಿಸುವ ಅಕ್ಷರಗಳು ಸ್ವರ್ಣಾಕ್ಷರಗಳಂತೆ ಮೆರೆಯುತ್ತಿದ್ದುವು. ಕೃತಕ ಗೋಡೆಗಳ ಮೇಲೆ ಅಲ್ಲಲ್ಲಿ ಭವ್ಯವಾದ ಪಠಗಳೂ, ನಿಲುವುಗನ್ನಡಿಗಳೂ ಪ್ರಕಾಶಿಸುತ್ತಿದ್ದುವು. ಭೂಪ್ರದೇಶವೆಲ್ಲವನ್ನೂ ರತ್ನಗಂಬಳಿಗಳು ಆವರಿಸಿಕೊಂಡಿದ್ದುವು. ಲಗ್ನ ಮಂಟಪವನ್ನು ಪೂದಂಡೆಗಳಿಂ ದಲೂ, ಚಿತ್ರಕಲೆಯವರ ವಿಚಿತ್ರ ವಿನ್ಯಾಸಗಳಿಂದಲೂ ಸೊಗಸು ಮಾಡಿದ್ದಿತು. ಜನರು ಕಿಕ್ಕಿರಿದಿದ್ದರು. ಎಲ್ಲರ ಮುಖದಲ್ಲಿಯೂ ಆನಂದಲಹರಿಯು ಉಕ್ಕಿ ಹರಿಯುತ್ತಿದ್ದಿತು. ಉತ್ಸಾಹ ಸಂಭ್ರಮಗಳಿಂದ ತಿರುಗಾಡುವ ಪ್ರಮದೆಯರ ಬೆಡಗು, ಬಿನ್ನಾಣ

ಗಳು ನೋಡಬೇಕೆಂದೆನಿಸುತ್ತಿದ್ದಿತು. ಸುವಾಸನಾ ದ್ರವ್ಯ ಗಳ ವಾಸನೆಯಿಂದ ಆವರಣವೆಲ್ಲವೂ ಘಮಘಮಿಸುತ್ತಿದ್ದಿತು. ಮಂಜುಳ ವಾದ್ಯಗಳು ಮೊಳಗುತ್ತಿದ್ದುವು. ಸುಮಂಗಲೆಯರ ಹಾಡುಗಳಿಗೆ ಪ್ರಾರಂಭವಾಯಿತು. ಒಬ್ಬರು ಮತ್ತೊಬ್ಬರನ್ನು ಬಲವಂತ ಪಡಿಸುತ್ತಿದ್ದರು. ಅವರಲ್ಲಿ ಉಬ್ಬುಹಲ್ಲಿನ, ಅಷ್ಟ ಕುಂಕುಮದ ಪೆದ್ದ ಮುತ್ತೈದೆಯು, "ದನಿಯಿಲ್ಲ, ದಾಟಿಯಿಲ್ಲ ಬಿಡಿರೇ, ನನ್ನನ್ನೇತಕ್ಕೆ ಪೀಡಿಸುತ್ತೀರಿ?" ಎಂದಳು ಒಯ್ಯಾರ ದಿಂದ ಕತ್ತನ್ನಾಡಿಸುತ್ತ ಮತ್ತೊಬ್ಬ ಚತುರೆಯು: 'ಸುಂದರಮ್ಮ ನವರೇ, ತಮ್ಮದಾಗಲಿ" ಎಂದಳು ಪುಸಲಾಯಿಸುವ ಧ್ವನಿಯಲ್ಲಿ. ಆಕೆಯು ತಟ್ಟನೆ ಸೆರಗನ್ನು ಸರಿಪಡಿಸಿಕೊಳ್ಳುತ್ತಾ: "ನನಗೆಲ್ಲಿ ಬರುತ್ತದೆಯೆ? ನೀನೇ ಹೇಳೆ ಚಿತ್ರಾಂಗಿ!" ಎಂದು ಮೂದಲಿ ಸುವ ಧ್ವನಿಯಲ್ಲಿ ನುಡಿದಳು. ಮತ್ತೊಬ್ಬ ಉದ್ದಕುಂಕುಮ ದಾಕೆಯು, ಹಾಲು ಕುಡಿಯುತ್ತಿದ್ದ ಮಗುವನ್ನು ದೂಷಿಸುತ್ತ: "ಈ ಪ್ರಾರಬ್ಧವನ್ನು ಮನೆಯಲ್ಲಿಯೇ ಬಿಟ್ಟು ಬಂದಿದ್ದರೆ ನಾನು ಹೇಳುತ್ತಿದ್ದೆನಮ್ಮ" ಎಂದಳು. ಆ ಕಾಲಕ್ಕೆ ಮತ್ತೊಬ್ಬ ರೇಖೆಯ ಚಂಚಲಾಕ್ಷಿಯು ಅಲ್ಲಿಗೆ ಬಂದಳು. ಉಳಿದವರೆಲ್ಲ ಆಕೆಯನ್ನು ಕಂಡು ಸಂಭ್ರಮದಿಂದ: "ಅದಿಗೊ! ಬಂದಿತು!! ಹಾಡಿನ ಗಣಿ! ಗಿಣಿ, ಮಣಿ" ಮುಂತಾಗಿ ಉದ್ಘೋಷಿಸಿದರು; ಹಾಗೂ ಹೀಗೂ ಪ್ರಯತ್ನ ಪಟ್ಟು ಆ ಚತುರೆಯು ಕಂಠವನ್ನು ಸರಿಪಡಿಸಿ ಕೊಂಡು: "ಹಸೆ ಎಎ ಗೆ ಎ ಳೇ ಏಏಏಏ!" ಎಂದು ದೀರ್ಘಿ ಸುವ ಹೊತ್ತಿಗೆ, ಪುರೋಹಿತ ನರಸಿಂಹಭಟ್ಟರ ಮಂತ್ರಘೋ ಷವು ಚಪ್ಪರವೇ ಹಾರಿಬೀಳುವಂತೆ ಧ್ವನಿಗೈದಿತು! ಆ ಭೈರವ ನಿನಾದದಲ್ಲಿ ಆ ಕುಲುಕುಗಾತಿ್ಯಯ ಹಾಡು ಅಷ್ಟಕ್ಕೇ ನಿಂತಿತು.

ಪುರೋಹಿತರು ಸುವರ್ಣ ಪುಷ್ಪಕ್ಕೆಂದು ದಕ್ಷಿಣೆ ಕೇಳುತ್ತಿದ್ದರು. ಶರ್ಮರು ಕೈಗೆ ಬಂದಷ್ಟು ತೆಗೆದು ಕೊಡುತ್ತಿದ್ದರು. ಶರ್ಮರು ಶ್ರೀಮಂತರಾದರೂ ಕೃಪಣರಾಗಿರಲಿಲ್ಲ. ಅವರು ನಿಂತಲ್ಲಿ ನಿಲ್ಲಲು ಪುರಸತ್ತಿಲ್ಲದಂತಿದ್ದಿತು. ಅಲ್ಲಿ, ಇಲ್ಲಿ ಹಾಡುತ್ತಿದ್ದರು. ದಾನ ಧರ್ಮ ಪರೋಪಕಾರಗಳೆಂದರೆ ಅವರು ಬೇಸರಪಡುತ್ತಿರಲಿಲ್ಲ. ಬ್ರಾಹ್ಮಣರಿಗೆ ಭೂರಿದಕ್ಷಿಣೆ ಕೊಡಲ್ಪಟ್ಟಿತು. ಧಾರೆಯ ಸಮಯವು ಬಂದಿತು. ವಧುವು ಧವಳ ವರ್ಣದ ಸೀರೆಯನ್ನುಟ್ಟು, ಅಂತಹದೇ ನಯವಾದ ರವಿಕೆಯನ್ನು ತೊಟ್ಟು, ಹಗುರವಾದ ಜಡೆಯಿಂದ, ಅವನಿತ ವದನಳಾಗಿ, ಲಜ್ಜಾಭಾರದಿಂದ ಕೂಡಿದ ಸಾವಧಾನದ ಪದವಿಕ್ಷೇಪದಿಂದ ತೆರೆಯ ಒಂದೆಬಂದು ಸೇರಿದಳು. ಮಂತ್ರಗಳು ಗಂಭೀರವಾಣಿಯಿಂದ ಕೇಳಿ ಬರುತ್ತಿದ್ದುವು. ಆಗಬೇಕಾದ ಶಾಸ್ತ್ರವಿಧಿಯಾದ ನಂತರ, ತೆರೆಯನ್ನು ಓರೆ ಮಾಡಿದರು. ಪ್ರೇಮಿಗಳ ಪರಸ್ಪರ ಮುಖಾವಲೋಕನವಾಯಿತು. ಪೂಮಾಲೆಗಳು ಒಬ್ಬರ ಕರದಿಂದೊಬ್ಬರ ಕೊರಳಿಗೆ ಬಿದ್ದುವು. ಮುರಾದೇವಿಯವರು ಎವೆಯಿಕ್ಕದೆ ಪುಟ್ಟ ದಂಪತಿಗಳನ್ನು ಚೇತನ ವಿಗ್ರಹದಂತೆ ಮನಸಾರ ನೋಡುತ್ತಿದ್ದರು. ಆನಂದಬಾಷ್ಪಗಳಿಂದ ಅವರ ನಯನವು ತೊಯ್ದು ಹೋಯಿತು. ಶರ್ಮರ ಹಾರಾಟದ ಧಾವಂತದಲ್ಲಿ ಅವರಿಗೆ ಅಷ್ಟು ಸುಖವನ್ನನುಭವಿಸಲು ವಿರಾಮವಿರಲಿಲ್ಲ. ಮುಂದೆ ನಡೆಯಬೇಕಾದ ಕೆಲಸಗಳೆಲ್ಲವೂ ನಡೆದವು. ಅದರಲ್ಲಿ ಹೆಚ್ಚೇನಂದರೆ, ಶರ್ಮರು ಹೇರಳವಾದ ಖರ್ಚಿನಿಂದ, ಸಕಲವೂ ಧಾರಾಳವಾದ ರೀತಿಯಲ್ಲಿ ಖರ್ಚು ಮಾಡಲು ಏರ್ಪಡಿಸಿದ್ದರೂ, ಅದರ ವಿನಿಯೋಗವು ಮಾತ್ರ ಸಕಾರಣವಾಗಿ ಆಗಲಿಲ್ಲ. ಸರಿಯಾದ

ಕಾರ್ಯದರ್ಶಿಗಳಿಲ್ಲದಿದ್ದುದೇ ಅವಕ್ಕೆ ಕಾರಣವಿರಬಹುದು. ಶರ್ಮರೊಬ್ಬರು ಎಷ್ಟೆಂದು ನೋಡಿಕೊಳ್ಳುವರು? "ಏತರಹೆ, ವಿಚಕ್ಷಣೆಗಳಿಲ್ಲದ ಬಳಿಕ ಎಷ್ಟು ಮಾಡಿದರೇನು?" ಎಂಬುದು ಹಲವರ ಬಾಯಿಂದ ಬಂದು ಹೋಯಿತು. ಕಡೆಗೆ ಕೆಲವರಿಗೆ ಅಸಮಾಧಾನವೂ, ಅತೃಪ್ತಿಯೂ ಉಂಟಾಯಿತು. ಅಂತೂ ಲಗ್ನವು ನಿಲ್ಲದೆ ನಡದೇ ಹೋಯಿತು.

---

[೫]




ರಾದೇವಿಯವರ ಅಭಿಪ್ರಾಯದಂತೆ ಶರ್ಮರು ಊರಜನರೆಲ್ಲರಿಗೂ ಸಂತರ್ಪಣೆಯನ್ನು ಮಾತ್ರ ಮಾಡಿಸಲಿಲ್ಲ. ಆ ವಿಚಾರವಾಗಿ ಮುರಾದೇವಿ ಯವರು ಗಂಡನಿಗೆ ಕೊಂಚ ಆಕ್ಷೇಪಿಸಿ ಮಾತನಾಡಿದರು. ಅದಕ್ಕೆ ಶರ್ಮರು: "ಆಗ ಅದೆಲ್ಲಾ ಗದ್ದಲಗಳನ್ನು ಇಟ್ಟುಕೊಂಡಿದ್ದರೆ, ಕೆಲಸಗಳು ಸಾಂಗ ವಾಗಿ ನಡೆಯುತ್ತಿರಲಿಲ್ಲ. ನಮ್ಮ ಕೆಲ ಇಷ್ಟ-ಮಿತ್ರರನ್ನೂ ಸಹ ನಾನು ಸಕಾಲಕ್ಕೆ ಕರೆಸಿಕೊಳ್ಳಲವಕಾಶವಾಗಲಿಲ್ಲ. ಎಲ್ಲಾ ಕಾರ್ಯಗಳು ಹದಿನೈದು ದಿವಸಗಳೊಳಗಾಗಿ ನಡೆಯಬೇಕೆಂದರೆ ಹೇಗಾಗಬೇಕು? ನೀನೇ ಹೇಳು." ಎಂದರು. ಅದಕ್ಕೆ ಮುರಾ ದೇವಿಯವರು: "ಅಷ್ಟು ಹುರಾಹುರಿಯಲ್ಲಿ ಮಾಡುವುದರ ಬದಲು ಬೇರೆ ಮುಹೂರ್ತವನ್ನು ನಿಷ್ಕರ್ಷೆ ಮಾಡಿದ್ದರಾಗುತ್ತಿರ ಲಿಲ್ಲವೆ?" ಎಂದುದಕ್ಕೆ, ಶರ್ಮರು "ಏನೋ ನಮ್ಮ ಪೂರ್ವಜನ ಪುಣ್ಯವಿಶೇಷದಿಂದ ನಮಗನುಕೂಲವಾದ ವರನೇ ಸಿಕ್ಕಿದ. ಅವ

ನನ್ನೂ ಒಡಂಬಡಿಸಿದ್ದಾಯಿತು. ಒಂದುವೇಳೆ ಲಗ್ನವನ್ನು ಸಾವಕಾಶಕ್ಕೆ ಬಿಟ್ಟಿದ್ದರೆ, ಈಗಿನ ಕಾಲದ ಹುಡುಗ. ಮತ್ತೆ ಮನಸ್ಸು ಚಲಿಸಿ, ಮದುವೆಗೆ ಒಪ್ಪದೆ ಹೋಗಿದ್ದರೆ ಹೇಗೆ? ಈ ಕಾರಣಗಳಿಂದ ಆವಷ್ಟು ಜಾಗ್ರತೆ ಮಾಡಿದ್ದಾಯಿತು. ಹೋಗಲಿ. ಮಾತ್ರಾವುದಾವರೂ ನೆವದಿಂದ ನಿನ್ನಭೀಷ್ಟವನ್ನೂ ನೆರವೇರಿಸುತ್ತೇನೆ” ಎಂಬುದಾಗಿ ಒಕ್ಕಣಿಸಿದರು.

[೬]




ದುವೆಯಾದ ಮೇಲೆ ಪ್ರಮೋದನು ಓದುವುದಕ್ಕೆ ಅನ್ಯದೇಶಕ್ಕೆ ಹೋಗುವೆನೆಂದು ಮಾವನವರೊಡನೆ ಹೇಳಿ ಹೋಗಿದ್ದನು. ಆತನು ಹೋಗಿ ಕೆಲವು ತಿಂಗಳಾಗುತ್ತಾ ಬಂದಿತಾದರೂ ಕ್ಷೇಮಲಾಭದ ಕಾಗದವಿಲ್ಲ. ಅಲ್ಲದೆ ಆತನೆಲ್ಲಿರುವನೆಂಬುದು ತಿಳಿಯದೆ ಶರ್ಮರೂ ಬರೆಯಲಾಗಲಿಲ್ಲ. ಆ ವಿಷಯವಾಗಿ ಶರ್ಮರೂ, ಮುರಾದೇವಿಯವರೂ ಬಹಳ ಪಶ್ಚಾತ್ತಾಪಪಡುತ್ತಿದ್ದರು. ದೀವಳಿಗೆ ಹಬ್ಬವು ಬಂದಿತು. ಮೊದಲ ವರ್ಷ! ಮಾಡುವುದೇನು? ಆ ಹಬ್ಬದಲ್ಲಿಯೇ ದೊಡ್ಡ ಸಮಾರಾಧನೆಯ ಸಮಾರಂಭವೆಂದು ಶರ್ಮರು ತೀರ್ಮಾನಿಸಿದ್ದರು. ಎಲ್ಲಕ್ಕೂ ಕಲ್ಲು ಬಿದ್ದಿತು. ಅಳಿಯನು ಅವಿಧೇಯನೆಂದೂ, ಇನ್ನೂ ಹಲವು ದುರಭಿಪ್ರಾಯಗಳೂ ಆ ದಂಪತಿಗಳ ಮನೋರಾಜ್ಯದಲ್ಲಿ ಹೊರಡಲಾರಂಭಿಸಿದವು. ದೀವಳಿಗೆಯೂ ಮುಗಿದು ಹೋಯಿತು. ವರ್ಷಗಳಾಗುತ್ತಾ ಬಂದುವು. ಮೂರು ವರ್ಷಗಳಾದುವು; ಆದರೂ ಅಳಿಯನ ಸಮಾಚಾರವಿಲ್ಲ. ಅವನು

ಜೀವದಿಂದಿರುವುದೂ, ಇಲ್ಲದಿರುವುದೂ ಊಹಿಸಲಾಗುತ್ತಿರಲಿಲ್ಲ!

ಇಷ್ಟರಲ್ಲಿ ಮುರಾದೇವಿಯವರಿಗೆ ಕ್ಷಯರೋಗವು ಜೀರೆ ಪ್ರಾಪ್ತವಾಯಿತು. ಬರಬರುತ್ತಾ ಅದು ಆಕೆಯ ಶರೀರವನ್ನು ಕೃಶಿಸಿ ಕಡೆಗೆ ಸೌಮಾಂಗಲ್ಯ ಯೋಗವನ್ನುಂಟು ಮಾಡಿತು.

ಶರ್ಮರು ಹತಾಶರಾದರು. ಅವರಿಗೆ ದಿಕ್ಕೇ ತೋಚದೆ ಹೋಯಿತು. "ದೇವರು ಸಕಲ ಸೌಭಾಗ್ಯಗಳನ್ನೂ ಕೊಟ್ಟ; ಆದರೆ ಕರುಣೆದೋರದೆ ಹೋದ. ಮಕ್ಕಳಿಲ್ಲವೆಂದು ಮರುಗುತ್ತಿದ್ದ ನನಗೆ ಈ ನಿರ್ಭಾಗ್ಯ ಹೆಣ್ಣನ್ನೇತಕ್ಕೆ ಕೊಟ್ಟನೋ ಕಾಣೆ! ಇವಳೇ ಹುಟ್ಟದಿದ್ದರೆ ನನಗೀ ತಾಪವಿರುತ್ತಿರಲಿಲ್ಲ. ನೀರಿನ ಗುಳ್ಳೆಯಂತೆ ಕೆಲದಿನಗಳ ಅಸಾರವಾದ ಆನಂದವು ಮೂಡಿ ಒಡೆದುಹೋಯಿತು. ಅವಸರದಲ್ಲಿ ಮದುವೆಯ ದಿನ ದಂಪತಿಗಳು ಪೀಠದ ಮೇಲೆ ಕುಳಿತುದನ್ನು ಸಹ ಕಣ್ಣು ತುಂಬ ನೋಡಲವಕಾಶವಾಗಲಿಲ್ಲ. ಹೀಗಾಗುತ್ತಿದೆಯೆಂದು ಯಾರು ತಿಳಿದಿದ್ದರು? ಅಂತೂ ಪ್ರಪಂಚದಲ್ಲಿ ತಿರಿದುಂಡರೂ ಸುಖವಾಗಿರಬಹುದು. ಈ ಐಶ್ವರ್ಯವೂ ಸಾಕು! ಈ ಮಕ್ಕಳಿಲ್ಲವೆಂಬ ಕೊರಗೆಟಿಯೂ ಸಾಕು! ಅದಾಗಿ ಅನುಭವಿಸುತ್ತಿರುವ ದುಃಖವೂ ಸಾಕು." ಮುಂತಾಗಿ ಯೋಚಿಸಿ-ಯೋಚಿಸಿ, ಚಿಂತೆಯೆಂಬ ಚಿತೆಯಿಂದ ಶರ್ಮರು ದಹಿಸಲ್ಪಡುತ್ತಿದ್ದರು. ಅದೇ ಮನೋರೋಗದಿಂದಲೇ ಅವರು ಹಾಸಿಗೆ ಹಿಡಿದು ಮಲಗಿದರು.

ಮನೆಗೆಲಸಗಳೂ, ಇತರ ವ್ಯವಹಾರಿಕ ವಿಷಯಗಳೂ ಕೇವಲ ಹದಿನೈದು ವರ್ಷದ ಅವರ ಮುದ್ದು ಮಗಳಿಂದಲೇ ನಡೆಯಬೇಕಾಗಿದ್ದಿತು. ಅದನ್ನು ನೋಡಿಯಂತೂ ಶರ್ಮರ ಪ್ರಾಣವೇ ಹೋದಂತಾಗುತ್ತಿದ್ದಿತು. ಅನಂತರ ಅವರು

ಹೇರಂಭಾಪುರದಲ್ಲಿದ್ದ ತಮ್ಮ ಭಾವ-ಮೈದುನನನ್ನು ಕರೆಸಿಕೊಂಡರು. ಆತನು ಬಂದ ಮೇಲೆ ಮಗಳು ಮನೆಗೆಲಸಗಳಲ್ಲಿ ಮಾತ್ರ ತೊಡಗುತ್ತಿದ್ದಳು. ಹೆಂಡತಿಯನ್ನೂ ಕರೆತರಲು ಶರ್ಮರು ಭಾವ-ಮೈದುನನಿಗೆ ಹೇಳಿದರು. ಕೆಲವು ಅನಿವಾರ್ಯಗಳಿರುವುದಾಗಿ ಆತನಿಂದ ತಿಳಿದು ಸುಮ್ಮನಿರಬೇಕಾಯಿತು.

ಶರ್ಮರಿಗೆ ವ್ಯಾಧಿಯು ಹೆಚ್ಚಾಗುತ್ತಾ ಬಂದಿತು. ಅದರ ನಿವಾರಣೆಯ ಸಲುವಾಗಿ ಭಾವ-ಮೈದುನನು ಔಷಧಿಗಳನ್ನು ಕೊಡಿಸಲು ಮೊದಲು ಮಾಡಿದನು. ಶರ್ಮರು ಔಷಧಿ ಬೇಡವೆನ್ನುತ್ತಿದ್ದರೂ, ವೈದ್ಯರ ಹಾವಳಿಯಿಂದಲೂ ಭಾವ-ಮೈದುನನ ಬಲಾತ್ಕಾರದಿಂದಲೂ ಕಡ್ಡಾಯವಾಗಿ ಕುಡಿಯಬೇಕಾಗಿ ಬಂದಿತು. ಮನೋರೋಗಕ್ಕೆ ಮದ್ದುಂಟೆ? ವೈದ್ಯರ ಔಷಧಿಗಳು ಶರ್ಮರಿಗೆ ಹೊಸ ಖಾಯಿಲೆಗಳನ್ನುಂಟುಮಾಡಿದುವು. ಹೀಗಾಗಿ ತಾವಿನ್ನು ಬದುಕುವುದಿಲ್ಲವೆಂದು ಶರ್ಮರು ತಿಳಿದವರಾದರು. ಕಡೆಗೆ ಅವಸಾನಕಾಲವು ಸಮೀಪಿಸಿತು. ಆಗ ಅವರು ಭಾವ-ಮೈದುನನನ್ನೂ, ಮಗಳನ್ನೂ ಹತ್ತಿರ ಕರೆದು: ‘‘ಮಗಳನ್ನು ಕೈಬಿಡಬೇಡವೆಂದೂ, ಅಳಿಯನೆಲ್ಲಿದ್ದರೂ ಹುಡುಕಿಸಿ, ಮಗಳನ್ನವನಿಗೊಪ್ಪಿಸಿ, ಆಸ್ತಿಯನ್ನವನ ವಶಪಡಿಸಬೇಕೆಂದೂ’’ ಭಾವ ಮೈದುನನಿಂದ ಪ್ರಮಾಣ ವಚನವನ್ನು ಹೊಂದಿ, ಜೀವನ್ಮುಕ್ತರಾದರು. ಶರ್ಮರ ಉತ್ತರ ಕ್ರಿಯಾದಿಗಳೂ ಪೂರೈಸಿದುವು.

ಶ್ರೀಧರಶರ್ಮನು ಅನಾಥೆಯಾದ ಕುಮುದೆಯನ್ನು ತನ್ನ ಗ್ರಾಮಕ್ಕೆ ಕರೆದುಕೊಂಡು ಹೋದನು. ಸ್ವಲ್ಪ ದಿನಗಳಲ್ಲಿಯೇ ಲಕ್ಷ್ಮಿಯು ವಾಸಿಸುತ್ತಿದ್ದ ಮನೆಯು ಕಡೆಗೆ ಪಿಶಾಚವಾಸಗೃಹವಾಯಿತು!

## [೭]



ಅಂದು ಚೈತ್ರ ಬಹುಳ ಬಿದಿಗೆಯಾಗಿದ್ದಿತು. ಆಗಸದಲ್ಲಿ ಸುಧಾಕರನಿನ್ನೂ ಮಾರ್ಗಸ್ಥನಾಗಿರಲಿಲ್ಲ. ಯಾಮಿನೀದೇವಿಯ ಆಧಿಪತ್ಯವೇ ಇನ್ನೂ ನೆಲೆಸಿದ್ದಿತು. ಇನ್ನೇನು, ಆಗಲೋ ಈಗಲೋ ಶುಧಾಂಶುವಿನಿಂದ ತಾನು ಪರಾಜಿತಳಾಗುವೆನೆಂದು ಆಕೆಯು ಕಳವಳಪಡುತ್ತಿದ್ದಳು. ಕನ್ನೈದಿಲೆಗಳು ತಮ್ಮ ಪ್ರಿಯನ ಆಗಮನವನ್ನೇ ಎದುರು ನೋಡುತ್ತಲಿದ್ದುವು.

ಬೊಂಬಾಯಿ ದಾದರಿನಲ್ಲಿ ಒಂದು ಸಾಮಾನ್ಯತರದ ಮನೆಯ ಮುಂದೆ ಸುಮಾರು ಹದಿನಾರು ವರ್ಷದ ತರುಣಿಯೋರ್ವಳು ಬಾಗಿಲಲ್ಲಿ ನಿಂತು ಯಾರ ಆಗಮನವನ್ನೊ ನಿರೀಕ್ಷಿಸುತ್ತಿದ್ದಳು. ಯಾರದಾದರೂ ಪದಸ್ಖಲಿತವಾದರೆ ಘಟ್ಟನೆ ಎಚ್ಚತ್ತು, ಸಂಭ್ರಮಾತುರತೆಗಳಿಂದ ಆ ಕಡೆ ನೋಡುವಳು. ಅದು ತನ್ನ ನಿರೀಕ್ಷಕರದಲ್ಲದಿದ್ದರೆ ಉದಾಸೀನದಿಂದ ಮತ್ತೆ ಯೋಚನೆಯಲ್ಲಿ ತೊಡಗುವಳು. ಅಷ್ಟು ಹೊತ್ತಿಗೆ ಚಂದ್ರನು ಚಂದ್ರಮುಖಿಯ ವದನಾಕರ್ಷಿತನಾದನು. ತಿಂಗಳು ಬೆಳಕಿನಲ್ಲಿ ಆ ತರುಣಿಯ ಉಡಿಗೆ, ತೊಡಿಗೆ, ಆಕಾರಾದಿಗಳು ಆಕರ್ಷಣೀಯವಾದವುಗಳಾಗಿದ್ದವು. ಅವಳುಟ್ಟಿದ್ದ ದುಕೂಲವು ಹಾಲಿನ ನೊರೆಯಂತೆ ಹಗುರವಾಗಿ, ಬಿಳುಪಾಗಿ, ಮೃದುವಾಗಿದ್ದಿತು. ತೊಟ್ಟಿದ್ದ ರವಿಕೆಯು ಬಹಳ ಸೂಕ್ಷ್ಮವಾಗಿ; ಮೈ ಕಾಣುವದೋ ಎಂಬಂತೆ ಗುಲಾಬಿ ವರ್ಣದಿಂದ ಯುಕ್ತವಾಗಿದ್ದಿತು. ನಡು ಬಡವಾಗಿ, ಎದ್ದು ಕಾಣುತ್ತಿದ್ದ ಕುಚಭಾರ

ರದಿಂದ ಬಳುಕುವದೋ ಎಂಬಂತಿದ್ದಿತು. ಹೊಂಬಣ್ಣದ ಮೊಗದಲ್ಲಿ ಕೆಂಬಣ್ಣದ ತಿಲಕವು ತಿದ್ದಿದ್ದಿತು. ನೀಳವಾದ ಜಡೆಯ ಮೇಲ್ಭಾಗದಲ್ಲಿ ಮಲ್ಲಿಕಾ ಕುಸುಮಗುಚ್ಛವು ಮನೋಹರವಾಗಿ ಶೋಭಿಸುತ್ತಿದ್ದಿತು. ಆ ಹೊತ್ತಿಗೆ 'ಚಟ್, ಚಟ್' ಎಂದು ಚಡಾವಿನ ಶಬ್ದಮಾಡುತ್ತ ಯುವಕನೋರ್ವನು ಆ ಮನೆಯ ಮುಂಭಾಗಕ್ಕೆ ಬಂದು ಸೇರಿದವನೇ, ತರುಣಿಯ ಕೈ ಹಿಡಿದು ಕುಲುಕಿಸುತ್ತಾ:—"ಬಹಳ ಹೊತ್ತಾಯಿತೇ ರತ್ನ?". ಎಂದನು ನಯವಾಗಿ. ಅವಳು ಉಕ್ಕಿ ಬರುತ್ತಿದ್ದ ಸಂತೋಷವನ್ನು ಅಡಗಿಸಿಕೊಳ್ಳುತ್ತ:—"ಅಂತೂ ಬಂದಿರಲ್ಲ!" ಎಂದು ಮಂಜುಳ ವಾಣಿಯಲ್ಲಿ ಹೇಳುತ್ತಿದ್ದಂತೆಯೇ ಇಬ್ಬರೂ ಮನೆಯೊಳಹೊಕ್ಕರು.

ಗಗನದಲ್ಲಿ ಚಂದ್ರನು ಪ್ರಶಾಂತನಾಗಿ ಹೊಳೆಯುತ್ತಿದ್ದನು. ವಾರಿದಗಳು ಆಗಾಗ ಗುಂಪು ಸೇರಿ ಅವನನ್ನು ಮುತ್ತುತ್ತಿದ್ದುವು. ನಿಶೆಯು ಚಂದ್ರನ ಮೇಲೆ ಯುದ್ಧಸನ್ನದ್ಧಳಾಗಿದ್ದಳು. ಚಂದ್ರ ನಾಕೆಯನ್ನು ಪ್ರಬಲ ಪರಾಕ್ರಮಗಳಿಂದಟ್ಟುತ್ತಿದ್ದನು.

ಸುಮಾರು ಅರ್ಧಗಂಟೆ ಕಳೆದಿರಬಹುದು. ಯುವಕನು ಪುನಃ ತರುಣಿಯ ಕೈ ಹಿಡಿದು ಹೊರಗೆ ಬಂದನು. ಆಗ ಶಶಾಂಕನ ಪ್ರಕಾಶವಿರಲಿಲ್ಲ.

ಅವರುಗಳ ಮುಖವೂ ಹಾಗೆಯೇ ಇದ್ದುವು. ತರುಣಿಯು ಮುಡಿದಿದ್ದ ಮೊಗ್ಗೆಗಳು ಮಾತ್ರ ಅರಳಿದ್ದುವು.

ಯುವಕನು ತರುಣಿಯನ್ನು ಸಂಬೋಧಿಸಿ: "ನಾಳೆ ಖಂಡಿತವಾಗಿ ತಂದುಕೊಡುತ್ತೇನೆ. ನೀನು ಯೋಚಿಸಬೇಡ. ಬರುತ್ತೇನೆ" ಎಂದು ಬೀಳ್ಕೊಂಡು, ದಡದಡನೆ ಹೊರಟು ನಡೆದನು. ತರು

ಣಿಯು ಬಾಗಿಲನ್ನು ಇಕ್ಕಿಕೊಂಡು ಒಳಗೆ ಹೊರಟಳು. ಯಾವ ಕಾರಣದಿಂದಲೋ ಒಳಗೆ ಅಗುಳಿಯನ್ನು ಹಾಕುವುದು ಮರೆತು ಹೋಯಿತು. ಅಗಲುಪಿಕೆಯ ದುಃಖದಿಂದಿರಬಹುದು, ಪಾಪ!

ಯುವಕನು ಜಾಗ್ರತೆಯಾಗಿ ಹೆಜ್ಜೆಗಳನ್ನು ಹಾಕುತ್ತಾ ಮುಂದು ಮುಂದಕ್ಕೆ ಸಾಗುತ್ತಿದ್ದನು. ಆ ಕಾಲಕ್ಕೆ ತಮವು ಜಂಯಿಸಲ್ಪಟ್ಟು, ಪುನಃ ಯಾಮಿನೀ ರಾಜ್ಯವೇರ್ಪಟ್ಟಿತು. ಕೂಡಲೆ ಗಾಳಿಯು ಬಲವಾಯಿತು. ಒಂದೊಂದೇ ಗಾತ್ರವಾದ ಹನಿ ಯುದುರುವುದಕ್ಕೆ ಮೊದಲಾಯಿತು. ಇದ್ದಕ್ಕಿದ್ದಂತೆಯೇ 'ಘಟ್ ಘಟ್' ಎಂದು ಮಳೆಯು ರಭಸವಾಯಿತು. ಯುವಕನು ಮುಂದೆ ನಡೆಯಲು ಸಾಧ್ಯವಿಲ್ಲದೆ, ಹತಾಶನಾಗಿ ಹಿಂದಿರುಗುತ್ತ ಓಡಿ ಹೋಗಿ, ಮೊದಲು ತಾನು ಹೊರಟ ಮನೆಬಾಗಿಲ ಬಳಿಗೆ ಹೋಗಿ, ಕದವನ್ನು ತಳ್ಳಿ ಮನೆಯವರನ್ನು ಕೂಗಬೇಕೆಂದಿದ್ದನು; ಆದರೆ ಕದವು ತಳ್ಳುತ್ತಲೇ ಹಿಂದಕ್ಕೆ ಹೋಯಿತು. ಯುವಕನು ಯಾರನ್ನೂ ಕರೆಯದೆಯೇ ಬಾಗಿಲು ಸರಾಗವಾಗಿ ಬಂದದ್ದಕ್ಕಾಗಿ ಮನಸ್ಸಿನಲ್ಲಿಯೇ ಸಂತೋಷಿಸುತ್ತಾ ಒಳಹೊಕ್ಕನು. ಒಂದು ಒಣಿಯನ್ನು ಹಾದು, ಕೊಂಚ ಎಡಭಾಗಕ್ಕೆ ತಿರುಗಿ, ಅಲ್ಲೊ ಸ್ವಲ್ಪ ಓಣಿಯಲ್ಲಿಯೇ ಮುಂದುವರಿದು, ಅನಂತರ ಒಳಮನೆಗೆ ಪ್ರವೇಶ ಮಾಡಬೇಕಾಗಿದ್ದಿತು. ಅಲ್ಲಿಯ ವರೆಗೂ ಹೋದನು. ನಡುಮನೆಯ ಬಾಗಿಲು ಹಾಕಿದ್ದುದರಿಂದ, ಇನ್ನು ಮುಂದೆ ಹೋಗಲಾಗಲಿಲ್ಲ; ಅಲ್ಲದೆ ಮನೆಯೊಳಗೆ ವಿಶೇಷ ಗದ್ದಲದಿಂದ ವ್ಯಾಜ್ಯ ನಡೆಯುತ್ತಿದ್ದಿತು. ಯುವಕನು ಅನುಮಾನಿತ ಮನಸ್ಕ ನಾಗಿ, ಕೌತುಕದಿಂದ ಅದನ್ನು ಆಲಿಸಬೇಕೆಂದು ನಿಶ್ಶಬ್ದನಾಗಿ ಹಾಗೆಯೇ ನಿಂತನು. ಒಳಗಿನ ವಾಗ್ಯುದ್ಧಾಟವು ಈ ರೀತಿ

ಯಾಗಿದ್ದಿತು:

"ನೀನು ಎಷ್ಟೇ ಹೇಳು, ನಾನು ಒಪ್ಪಲೊಲ್ಲೆನು."

"ಮತ್ತೇನನ್ನು ಮಾಡ ಹೇಳುವೆ?"

"ಹದಿನಾರುವರ್ಷದ ಹುಡುಗಿಗೆ, ಅದರಲ್ಲೂ ವೇಶ್ಯಾ ಕುಲದಲ್ಲಿ ಹುಟ್ಟಿದವಳಿಗೆ, ಸಲ-ಸಲವೂ ಹೇಳಿಕೊಡುತ್ತಿರ ಬೇಕೇನು? ನಿನ್ನ ಜನ್ಮಕ್ಕೆ ನಾಚಿಕೆಯಾಗದಿರುವುದು ಹೆಚ್ಚು. ನೀನು ಪೂರ್ಣವಾಗಿ ಅವನ ವಶವರ್ತಿನಿಯಾಗಿರುವೆ. ಪಾರವನಿ ತೆಯರೆಂದಿಗಾದರೂ ವಿಟನ ಮೋಹಕ್ಕೊಳಗಾಗುವದುಂಟೇ? ಹಾಗಾದ ಮೇಲೆ ಈ ವೃತ್ತಿಯೇತಕ್ಕೆ? ಈ ಸಾಧನವೇತಕ್ಕೆ? ಚೆನ್ನಾಯಿತು! ಚೆನ್ನಾಯಿತು!!"

"ನಾನು ಅವರ ವಶವರ್ತಿನಿಯಾದುದಾವಾಗ?"

"ಮತ್ತೊಮ್ಮೆ 'ಅವರು' ಎಂಬ ಶಬ್ದವನ್ನೆತ್ತಿದರೆ ನಾಲಿಗೆ ಯನ್ನೇ ತುಂಡರಿಸುವೆನು. ಚಿಕ್ಕ ಪುಟ್ಟ ವಿಷಯುಗಳಲ್ಲಿಯೂ ಪರಿಜ್ಞಾನವಿಲ್ಲದೆ ವರ್ತಿಸುತ್ತಿರುವೆ. ನಿನ್ನ ಮೋರೆ ಸುಟ್ಟಿತು. ಎದುರು ಮನೆಯ ಶಾರದಾಸಾನಿಯನ್ನು ನೋಡು. ಆ ಮುದಿ ಗೂಬೆಯು ಬಂದಾಗ ಹಾವ, ಭಾವ, ವಿಲಾಸಗಳಿಂದ ಬೆರಗು ಮಾಡಿ, ಚಂದ್ರಹಾರವನ್ನು ಪಾಡಿಸಿಕೊಂಡಳು. ಅವನ ಮರೆ ಯಲ್ಲಿ ಲೆಕ್ಕವಿಲ್ಲದಷ್ಟು ಜನ ಬಂದು-ಹೋಗುವರು. ನಿನ್ನಂತೆ ಒಬ್ಬನೇ ಮಹಾನುಭಾವನೆಂದು ನಂಬಿಕೊಂಡಿದ್ದರೆ, ಅವಳು ಮೂರುಕಣ್ಣಿನ ಚಿಪ್ಪೇ ತೆಗೆದುಕೊಳ್ಳಬೇಕಾಗುತ್ತಿದ್ದಿತು."

"ದಯವಿಟ್ಟು ಇದೊಂದು ಸಲ ಕ್ಷಮಿಸು. ನಾನು ಮಾಡ ಬೇಕೋ ತಿಳಿಸು."

"ನಮ್ಮ ಕುಲವೃತ್ತಿಯೇನಿದ್ದರೂ 'ಹಣವಂತ' ಎಂಬ

ಶಬ್ದಕ್ಕೆ ಬೆಲೆ ಕೊಡಬೇಕೇ? ಏನು ಆಕಾರ, ವಿಕಾರ, ಗೌರವ ಇತ್ಯಾದಿಗಳ ಗೊಡವೆ ನಮಗೆ ಬೇಡ. ಅಲ್ಲದೆ ನಿಜವಾದ ಪ್ರೀತಿಯನ್ನು ಯಾರಲ್ಲಿಯೂ ತೋರಿಸಕೂಡದು. ಏನಿದ್ದರೂ **ನಟನೆ**ಯಿಂದ ಮರುಳು ಮಾಡಬೇಕು. ಜ್ಞಾನ ಬಂದಿತೋ?"

"ಆಗಲಿ."

"ನಾಳೆ ಎಷ್ಟು ಕೊಡುತ್ತೇನೆಂದು ಹೇಳಿದ?"

"ಹತ್ತು ರೂಪಾಯಿಗಳನ್ನು."

"ಅವನ ಮುಖದ ಮೇಲೆಸೆ ಅದನ್ನು. ಚಿನ್ನದ ಬಳೆಗಳಿಗೇನು ಹೇಳಿದ?"

"ಮುಂದಿನ ತಿಂಗಳಲ್ಲಿ ಮಾಡಿಸುವರಂ....ಅಲ್ಲ....ಅಲ್ಲ....ನಂತೆ"

"ಅತ್ತ ಹಾಗೆಯೇ. ನಾಳೆ ಅವನು ಬಂದೊಡನೆಯೇ ಹೋಗಿ, ಅವನ ಮೇಲೆ ಬಿದ್ದು ಬಿಡಬೇಡ. ಇರಲಿ. ಆ ವಿಚಾರವಾಗಿ ಆ ಮೇಲೆ ಹೇಳುತ್ತೇನೆ. ಅವನು ಹೆಂಡತಿ, ಮಾವಂದಿರಿಗೆ ಬರೆದಿದ್ದ ಕಾಗದಗಳನ್ನು ಇಸುಗೊಂಡೆಯಾ?"

"ಅಂಚೆ ಪೆಟ್ಟಿಗೆಯಲ್ಲಿ ಹಾಕುವುದಾಗಿ ಹೇಳಿ ಕಸುಗೊಂಡಿರುವೆನು."

"ಮುಂಡೆ! ಎಷ್ಟು ಕಾಗದಗಳನ್ನು ಅಂಚೆ ಪೆಟ್ಟಿಗೆಯಲ್ಲಿ ಹಾಕಿರುವೆಯೊ?"

"ಒಂದೂ ಹಾಕಲಿಲ್ಲವಲ್ಲಮ್ಮಾ. ಎಲ್ಲವನ್ನೂ ನೀನೇ ಹರಿದು ಹಾಕದೆ?"

"ಮತ್ತೆ ಹಾಕುತ್ತೇನೆಂಬ ಮಾತು ಆವುದಕ್ಕೆ?"

"ಆತನೊಡನೆ ಹೇಳಿದುದು ಮಾತ್ರ ಹಾಗೆ."

“ಆ ಮಾತನ್ನು ಅಲ್ಲಿಗೇ ಮರೆತು ಬಿಡಬೇಕೆಂದು ಒಮ್ಮೆ ಹೇಳಿದುದಲ್ಲವೇ? ಥೂ! ಥೂ!! ನಿನ್ನಂತಹ ಮೊದ್ದೆಮ್ಮೆಯನ್ನು ನಾನೆಲ್ಲಿಯೂ ಕಾಣೆ. ಎಲ್ಲಿ ಆ ಕಾಗದಗಳನ್ನಿಲ್ಲಿ ತಾ. ಬೇಡ-ಬೇಡ; ನೋಡೋಣ ನಿನ್ನ ಅಳುವು, ನೀನೇ ಓದು.”

‘ತೀರ್ಥರೂಪ ಸಮಾನರಾದ ಮಾವನವರಿಗೆ, ನಮಸ್ಕಾರ ಗಳು. ತಮಗೆ ಲೆಕ್ಕವಿಲ್ಲದಷ್ಟು ಕಾಗದಗಳನ್ನು ಬರೆದರೂ ಒಂದಕ್ಕರವಾದರೂ ಪ್ರತ್ಯುತ್ತರವಿಲ್ಲ. ಇನ್ನು ಮನಸ್ಸಿನ ಶಾಂತತೆಯನ್ನು ತಡೆಯಲಾರೆ. ತಮ್ಮಿಂದ ಉತ್ತರ ಬಾರ ದಿದ್ದರೆ, ತಮಗೆ ಈ ಜನ್ಮದಲ್ಲಿ ಅಳಿಯನಿಲ್ಲವೆಂದೇ ತಿಳಿಯು ತ್ತೀರಿ.’ ಪ್ರಮೋದ ಕುಮಾರ್, ಬಿ. ಎ.

“ಅವನ ತಲೆ. ಮತ್ತೊಂದು ಕಾಗದವನ್ನೋದು.”

“ಪ್ರಿಯ ಕುಮುದ, ಈ ಸಲವಾದರೂ ನಿನ್ನಿಂದ ಲೇಖಿ-ಯು ಬಾರದಿದ್ದಲ್ಲಿ ಇನ್ನು ನನ್ನನ್ನು ಹೊಂದಲಾರೆ.”

ಪ್ರಮೋದ ಕುಮಾರ್, ಬಿ. ಎ.

“ಅಹಹಹಹ! ಏನು ಪ್ರೇಮವೊ? ಮೊದಲಿನ ಕಾಗದ ಗಳೆಲ್ಲವೂ ಅವರಿಗೆ ತಲುಪಿದ್ದರೆ, ಇವನನ್ನಿಲ್ಲಿ ಬಿಡುತ್ತಿದ್ದರೆ? ಎಂದೋ ಕರೆದುಕೊಂಡು ಹೋಗುತ್ತಿದ್ದರು; ಅಥವಾ ಇವ ನಾದರೂ ಹೋಗುತ್ತಿದ್ದನು. ಏನು ಜನ್ಮವೊ? ಹೋಗಲಿ. ಆ ಕಾಗದಗಳನ್ನು ಹರಿದು ಹಾಕು. ಯಾವಾಗ ಮಾವನಿಂದಲೂ ಹೆಂಡತಿಯಿಂದಲೂ ಕಟ್ಟಕಡೆಯ ಕಾಗದಗಳು ಬರಲಿಲ್ಲವೋ, ಉರಿವ ಜ್ವಾಲೆಯಲ್ಲಿ ತುಪ್ಪವನ್ನೆರಚಿದಂತಾಗುತ್ತದೆ. ಅನಂ ತರ ಅವನಿಗೆ ಹುಚ್ಚು ಹಿಡಿಸಿ, ಅವನ ಆ ಸ್ತ್ರೀಯನ್ನು ದಕ್ಕಿಸಿ ಕೊಂಡು, ಶಾರದಾಪಾನಿಗಿಂತಲೂ ಪದ್ಮಾಪಾನಿಯು ಮಗಳು

ಒಂದು ಕೈ ಮೇಲೆಂದೆನಿಸದಿದ್ದರೆ ನಾನು ನಿಮ್ಮಿಮ್ಮನೆ?"

§ § § § § §

ಹೊರಗೆ ಕೇಳುತ್ತಿದ್ದ ಯುವಕನ ಮುಖವು ಬಿವತು ಬೆಂಡಾಯಿತು. ಶರೀರವು ಅದುರಿತು. ರೋಮಾಂಚನಾಯಿತು. ಗುಂಡಿಗೆಯೊಡೆದು ನೀರಾಯಿತು. ಕಣ್ಣುಗಳಲ್ಲಿ ಹನಿಯುದುರಿತು. ಒಮ್ಮೆ ಕ್ರೋಧಿತನಾಗುವನು. ಒಡನೆಯೇ ಅದನ್ನು ಅಡಗಿಸಿಕೊಳ್ಳುವನು. ಬಗೆ ಬಗೆಯ ಯೋಚನೆಗಳು ಅವನ ಹೃದಯ ಮಧ್ಯದಲ್ಲಿ ನಾಟ್ಯವಾಡತೊಡಗಿದುವು. ಕಡೆಗೆ ನಿಟ್ಟುಸಿರನ್ನು ಬಿಡುತ್ತ ಆ ಪ್ರದೇಶದಿಂದ ಬೇಗನೆ ತೊಲಗಿ ಹೋದನು. ಹೊರಗೆ ಬಂದು ನೋಡುವಲ್ಲಿ ಮಳೆಯು ನಿಂತಿದ್ದಿತು. ಚಂದ್ರನೂ ಪ್ರಕಾಶಮಾನನಾಗಿ ತೋರುತ್ತಿದ್ದನು. ತಂಗಾಳಿ ಬೀಸುತ್ತಿದ್ದಿತು. ಯುವಕನು ಉನ್ಮತ್ತನಂತೆ ಉಗೆಬಂಡಿಯ ನಿಲ್ದಾಣದ ಕಡೆಗೆ ಓಡಿದನು. ಗಾಡಿಯು ಕಂಬಿಯ ಮೇಲೆ ಸಿದ್ಧವಾಗಿದ್ದಿತು. ಜಾಗ್ರತೆಯಾಗಿ ತಿಕೀಟು ಮಾರುತ್ತಿದ್ದಲ್ಲಿಗೆ ನುಗ್ಗಿದನು.

—

[೮]




ದು ಜನರಿಂದ ನಿಬಿಡೀಕೃತವಾಗಿ, ಸಮಸ್ತ ಸುಖಗಳಿಗೂ ಮಾತೃಸ್ಥಾನವಾಗಿದ್ದ ಗೃಹವು ಇಂದು ಶುನಕ, ಗಾರ್ದಭ, ವಾನರಾದಿಗಳ ಆವಾಸಸ್ಥಾನವಾಗಿದೆ. ಅಂದು ಹಸರು ಚಪ್ಪರದಿಂದ ಭೂಷಿತವಾಗಿ, ಅನೇಕ ಜನರ ಕಣ್ಮನಗಳನ್ನು ಆನಂದಗೊಳಿಸಿದ್ದ ಪ್ರದೇಶವು, ಇಂದು ಕಸ, ಕಡ್ಡಿಗಳಿಂದಲೂ

ಗೊಬ್ಬರದ ಗುಡ್ಡೆಗಳಿಂದಲೂ ಮನಸಿಗೆ ಅಸಹ್ಯವನ್ನುಂಟು ಮಾಡುತ್ತಿದೆ. ಅಂದು ಮಂಜುಳ ವಾದ್ಯಗಳಿಂದಲೂ ಸುವಾಸಿನಿಯರ ಗೀತರವದಿಂದಲೂ ಕರ್ಣಾನಂದಕರವಾಗಿದ್ದ ಸ್ಥಳದಲ್ಲಿ ಇಂದು ವಾಯಸ, ಗೃಧ್ರ ಮೊದಲಾದವುಗಳ ಕರ್ಣಕಠೋರ ನಿನಾದವು ಕೇಳಬರುತ್ತದೆ. ಅಂದು ಗೃಹಲಕ್ಷ್ಮಿಯು ಅತಿಥಿ, ಅಭ್ಯಾಗತರನ್ನು ಸತ್ಕರಿಸಿ ಆದರಿಸುತ್ತಿದ್ದ ಮನೆಯಲ್ಲಿ, ಇಂದು ಮೌನಧಾರಿಣಿಯಾದ ಕರಾಳಿಯು ಬಂದವರನ್ನು ದೂಡುತ್ತಿದ್ದಾಳೆ. ಅಂದು ಹಗಲೆನ್ನದೆ, ರಾತ್ರಿಯೆನ್ನದೆ ಲಕ್ಷ್ಮಿಯು ತಾನೇ ತಾನಾಗಿ ವಿಹರಿಸುತ್ತಿದ್ದ ಮನೆಯಲ್ಲಿ, ಇಂದು ದರಿದ್ರಲಕ್ಷ್ಮಿಯು ಬಹಳ ವೈಭವದಿಂದ ವಿಹರಿಸುತ್ತಿದ್ದಾಳೆ. ಎಂದು ಮುರಾದೇವಿಯುವರೂ, ಶರ್ಮರೂ ಇಹವ್ಯಾಪಾರವನ್ನು ಸ್ವಲ್ಪಕಾಲವೊಳಗಾಗಿಯೇ ಮುಗಿಸಿಕೊಂಡು ಹೋದರೋ, ಅಂದೇ ಆ ಮನೆಯೂ ಮುರಿದು ಹೋಯಿತು. ದೈವಗತಿಯು ವಿಚಿತ್ರವಾದುದು!

ಪೌರಜನರಲ್ಲಿ ಅಸೂಯಾಪರರಾದ ಕೆಲವರು "ಆ ಗೃಹದಲ್ಲಿ ಭೂತವಿದ್ದಿತೆಂತಲೂ, ಅದು ಮನೆಯವರೆಲ್ಲರನ್ನೂ ಕೊನೆಗಾಣಿಸಿತೆಂತಲೂ" ಜೋಡಿಸಿ ಹೇಳಿದರು. ಊರೆಲ್ಲವೂ ಅದೇ ಪ್ರತೀತಿಯಿಂದ ತುಂಬಿ ಹೋಯಿತು. ಎಲ್ಲರೂ ಆ ಮನೆಯ ಸಮೀಪಕ್ಕೆ ಹೋಗಲು ಅಂಜುತ್ತಿದ್ದರು.

ಮನೆಯ ಮುಂಭಾಗಕ್ಕೆ ಕೊಂಚ ದೂರದಲ್ಲಿ ಪುಂಡು ಹುಡುಗರ ಗುಂಪೊಂದು ಆಟದಲ್ಲಿ ಮಗ್ನವಾಗಿದ್ದಿತು. ಆ ಸಮಯಕ್ಕೆ ಅಶ್ವಶಕಟವೊಂದು ಆ ಮನೆಗಭಿಮುಖವಾಗಿ ಹೋಗುತ್ತಿದ್ದುದನ್ನು ಕಂಡು, ಆ ತುಂಟರಲ್ಲಿ ಒಬ್ಬನು: "ಯಾರಯ್ಯಾ

ಅದು? ಆ ಮನೆ ಕಡೆ ಗಾಡಿ ಬಿಡುತ್ತಿರುವೆ?'' ಎಂದು ಕಿರು ಚುತ್ತಾ ಕೇಳಿದನು. ಗಾಡಿಯು ನಿಂತಿತು. ಬಾಡಿದ ಮೊಗ ದಿಂದ ಕೂಡಿದ ಓರ್ವ ಯುವಕನು ಹಿಂದಿನಿಂದ ಕೆಳಗಿಳಿದು ಬಂದು: ''ಹುಡುಗರಿರಾ, ಸುಂದರ ಶರ್ಮರ ಮನೆ ಇದೇ ಅಲ್ಲವೆ?'' ಎಂದು ವಿನಯವಾಗಿ ಕೇಳಿದನು. ಅದಕ್ಕಾ ಪೋರನು: ''ನಿನ ಗೇನು ಹುಚ್ಚು ಹಿಡಿಯಿತೇನಯ್ಯಾ? ನೀನು ಯಾವ ಲೋಕ ದಿಂದ ಬಂದಿರುವೆ? ಎಲ್ಲಿಯ ಶರ್ಮರು? ಎಲ್ಲಿಯ ಮನೆ?'' ಎಂದು ವಿಕಟಾಟ್ಟಹಾಸದಿಂದ ಮಾತು ಬೆಳೆಸುತ್ತಿದ್ದಂತೆಯೇ ಯುವಕನು, ''ಹಾಗೆಂದರೇನು? ಶರ್ಮರೂ, ಅವರ ಪತ್ನಿ ಯವರೂ, ಮಗಳೂ ಎಲ್ಲಿಗೆ ಹೋದರು?'' ಎಂದು ಗಾಬರಿ ಯಿಂದ ಕೇಳಿದನು. ಅದಕ್ಕೆ ಹುಡುಗನು: ''ಏನಯ್ಯಾ, ಪೆದ್ದಭಟ್ಟ ನಂತೆ ಮಾತನಾಡುತ್ತಿರುವೆ? ಶರ್ಮರೂ ಅವರ ಹೆಂಡತಿ-ಮಗಳೂ ಸತ್ತು ಎಷ್ಟು ದಿವಸಗಳಾದುವು? ನೀನೂ ಸಹ ಆ ಮನೆಯೊಳಗಿರುವ ಭೂತಗಳಿಗೆ ಆಹುತಿಯಾಗಲು ಬಂದೆ ಯೇನೋ?'' ಎಂದು ಹೇಳುತ್ತಿರುವಂತೆಯೇ ಯುವಕನ ಮೈ ಮೇಲೆ ಸ್ಮರಣೆಯೇ ಇದ್ದಂತೆ ಕಂಡುಬರಲಿಲ್ಲ. ಅವನು ಹಾಗೆ ಯೇ ಗಾಡಿಗೆ ಒರಗಿದನು. ಆ ಕ್ಷಣದಲ್ಲಿಯೇ ಗಾಡಿಯ ಆಳು ಓಡಿ ಬಂದು, ಅವನನ್ನು ಕೆಳಕ್ಕೆ ಬೀಳದಂತೆ ಹಿಡಿದು, ಗಾಡಿ ಯೊಳಕ್ಕೆ ಎತ್ತಿ ಹಾಕಿದನು.



[೯]



ಶ್ರೀಧರನು ಸುಂದರಪುರದಿಂದ ಕುಮುದೆಯನ್ನು ಕರೆದುಕೊಂಡು ತನ್ನ ಸ್ವಗ್ರಾಮವಾದ ಹೇರಂಭಾಪುರಕ್ಕೆ ಬಂದು ಸೇರಿದ ನಂತರ, ಸುಂದರಪುರದಲ್ಲಿ ನಡೆವ ಸಮಾಚಾರಗಳೆಲ್ಲವನ್ನೂ ತನ್ನ ಅರ್ಧಾಂಗಿಯೊಡನೆ ಹೇಳಿದನು. ಅವನ ಹೆಂಡತಿಯ ಹೆಸರು ಚಂಚಲೆ. ಅವಳು ಹೆಸರಿಗೆ ತಕ್ಕಂತೆ ಚಂಚಲೆಯೇ ಆಗಿದ್ದಳು. ವಯಸ್ಸು ಮೂವತ್ತಕ್ಕೆ ದಾಟಿದ್ದರೂ, ಹದಿನಾರು ವರ್ಷದ ಹುಡುಗಿಯಂತೆ ತೋರುತ್ತಿದ್ದಳು. ಸ್ವಲ್ಪ ಗಾತ್ರ ಶರೀರ, ಗೌರ ವರ್ಣ, ಕಣ್ಣೂ-ಮೂಗೂ ನೇರವಾಗಿದ್ದವು. ತಲೆಗೂದಲು ಮೃದುವಾಗಿ, ಅಚ್ಚಗಪ್ಪಾಗಿ, ಸರ್ಪಾಕಾರವಾಗಿ ಜಡೆಯಿಂದ ಕೂಡಿರುತ್ತಿತ್ತು. ಬೂದು ಬಣ್ಣದ ಕಣ್ಣುಗುಡ್ಡೆಗಳು ಸೌಂದರ್ಯಕ್ಕೆ ಸಹಕಾರಿಯಾದವುಗಳೆಂದು ಕಲಾವಿದರು ಒಪ್ಪಿಕೊಳ್ಳುವಂತಿದ್ದರೆ, ಸುಂದರಿಯೇ ಆಗಿದ್ದಳು. ಸ್ವಲ್ಪ ಗಂಭೀರವಾದ ಮಧುರವಾದ ವಾಣಿ.

ಶ್ರೀಧರನು ಹೇಳಿದುದೆಲ್ಲವನ್ನೂ ಕೇಳಿ ಚಂಚಲೆಯು: 'ಇವಳನ್ನೇನು ಮಾಡಲು ಕರೆದುಕೊಂಡು ಬಂದಿರಿ?' ಎಂದಳು. ಶ್ರೀಧರನು:—"ಕುಮುದೆಯೂ ನಿನ್ನ ಮಗಳ ಜೊತೆಯಲ್ಲೊಬ್ಬ ಮಗಳೆಂದು ತಿಳಿ" ಎಂದನು. ಹಾಗೆ ಹೇಳುತ್ತಿದ್ದಂತೆಯೇ ಅವಳ ಕಣ್ಣುಗಳು ಒಂದು ಬಗೆಯಾದುವು. ಹಣೆಯ ಮೇಲೆ ಗೆರೆಗಳೇರ್ಪಟ್ಟುವು. ಭ್ರೂಯುಗ್ಮಗಳು ಸಂಕುಚಿತವಾದುವು. ವ್ಯತ್ಯಾಸದ ಧ್ವನಿಯಿಂದ, "ಆಗಬಹುದೇಳಿ" ಎಂದು ಅಂದಳು.

ಶ್ರೀಧರನು ಪ್ರಿಯಳ ಅಭಿಪ್ರಾಯಕ್ಕೆ ಎಂದಿಗೂ ವಿರೋಧವಾಗಿ ನಡೆಯುತ್ತಿರಲಿಲ್ಲ. ಅದು ಅವನ ಪ್ರೇಯಸಿಯ ಒಲಪಿನ ವಿಧೇಯತೆ. ಪ್ರತಿಭಟಿಸಿ ಮಾತನಾಡುವುದೆಂದರೆ, ಸಾಧ್ಯವೇ ಇರಲಿಲ್ಲ. ಅವನ ಪ್ರಕೃತಿ ಅಂತಹದು.

ಸುಂದರಪುರಕ್ಕೆ ಮೊದಲು ತಾನು ಹೊರಡುವಾಗ ಹೆಂಡತಿಯನ್ನೂ ಬರಬೇಕೆಂದು ಕೇಳಿಕೊಂಡನು. "ನನ್ನಿಂದ ಕೆಲಸ ನಿಂತಾಗ ನಾನೇ ಬರುತ್ತೇನೆ." ಎಂಬ ಉತ್ತರವನ್ನು ಹೊಂದಿ ಹೋಗಿದ್ದನು. ಒಟ್ಟಿನ ಮೇಲೆ ಹೆಂಡತಿಯು ಅಡಿಯಾಳಾಗಿದ್ದನೆಂದು ಹೇಳಿದರೂ ಒಂದು ಗೌರವವು ಮಾತ್ರ. ಆ ಮಾತನ್ನು ಸಾಂಗಗೊಳಿಸದೆ ತಡೆದು ಬಿಟ್ಟಿದ್ದಿತು. ಹೆಂಡತಿಯು ಬಹುವಚನ ಶಬ್ದಪ್ರಯೋಗವೇ ಅದಾಗಿದ್ದಿತು.

ಶ್ರೀಧರನಿಗೆ ಹದಿನಾರು ವರ್ಷದ ಹಿರೀ ಮಗನೊಬ್ಬನೂ, ಮೂರು ವರುಷದ ಮಗಳೊಬ್ಬಳೂ ಇದ್ದರು. ಮಧ್ಯೆ ಕೆಲವು ಕೈಗೆ ದಕ್ಕದೆ ಹೋಗಿದ್ದುವು. ಅವುಗಳ ಮಾತು ನಮಗೆ ಬೇಡ. ಸದ್ಯಕ್ಕೆ ಸಂಸಾರದಲ್ಲಿ ಅಷ್ಟು ಮಾತ್ರವಿದ್ದರು. ಹೊಸದಾಗಿ ಬಂದು ಸೇರಿದವಳು ಕುಮುದೆ.

ಮಾಧವನೆಂಬ ಹೆಸರು ಮಗನಿಗೂ, ಶಾಮಲೆ ಎಂಬ ನಾಮಧೇಯವು ಮಗಳಿಗೂ ಇಡಲ್ಪಟ್ಟಿದ್ದಿತು.

ಚಂಚಲೆಗೆ ಪ್ರಪಂಚದಲ್ಲಿ ತಾನೂ ತನ್ನ ಮುದ್ದು ಮಕ್ಕಳೆರಡೂ, ದುಡಿಯುವುದರ ಸಲುವಾಗಿ ಗಂಡನು ಒಬ್ಬನೂ ಎಂಬ ಭಾವನೆಯಿದ್ದಿತು. ಅಂತೂ ಸ್ವಾರ್ಥಪರತೆಯಲ್ಲಿ ಅಗ್ರತಾಂಬೂಲವನ್ನು ಕೊಡಬೇಕಾದರೆ, ಅದು ಚಂಚಲೆಯದಾಗಿದ್ದಿತು.

ತನ್ನ ಸಂಸಾರದಲ್ಲಿ ಕುಮುದೆಯು ಬಂದು ಸೇರಿದಂದಿ

ನಿಂದಲೂ ಆಕೆಯ ನೆಮ್ಮದಿಗೆ ಏನೋ ಒಂದು ದೊಡ್ಡ ಆತಂಕ ವುಂಟಾಯಿತೆಂದು ಭಾವಿಸುತ್ತಿದ್ದಳು. ಒಮ್ಮೊಮ್ಮೆ ಕುಮುದೆ ಗಿದ್ದ ಅಪಾರವಾದ ಆಸ್ತಿಯಿಂದ ಕೊಂಚ ಸಮಾಧಾನ ಪಡು ವಳು. ಮರುಕ್ಷಣದಲ್ಲಿಯೇ ಆ ಸಂಪತ್ತು ತಮಗೆ ದಕ್ಕುವು ದಲ್ಲವೆಂಬ ಕಲ್ಪನೆಯುಂಟಾದಾಗ, ಏನೋ ಕಳೆದುಕೊಂಡವ ಳಂತೆ ಬಹು ಪಶ್ಚಾತ್ತಾಪಬಡುವಳು. ಕಟ್ಟಕಡೆಗವಳು ಒಂದು ಯೋಚನೆ ಮಾಡಿದಳು. ಬಹು ಯುಕ್ತಿಪರಳಾದ ಆಕೆಯು, ಅದನ್ನೇ ಸ್ಥಾಪಿಸಲು ಪ್ರಯತ್ನಪಡತೊಡಗಿದಳು. ತನ್ನ ಹಂಚಿಕೆಯನ್ನು ಪುನಃ ಪುನಃ ವಿಮರ್ಶೆಮಾಡತೊಡಗಿದಳು: ‘‘ಕುಮುದೆಯು ಹುಡುಗಿ. ಅಷ್ಟಾಗಿ ಪ್ರಪಂಚದ ಅನುಭವ ವಿಲ್ಲ. ಕಷ್ಟ-ಸುಖಗಳ ಪರಿವೆಯೇನೆಂಬುದನ್ನರಿಯಳು; ಅಲ್ಲದೆ ತಂದೆ-ತಾಯಿಗಳನ್ನು ಕಳೆದುಕೊಂಡು ಬಹು ದುಃಖದಲ್ಲಿರು ವಳು. ಮದುವೆಯಲ್ಲಿ ಗಂಡನ ಮುಖವನ್ನು ಸಹ ಸರಿಯಾಗಿ ನೋಡಿದ್ದಳೋ, ಇಲ್ಲವೋ! ಸದ್ಯದ ಅವಳ ಅವಸ್ಥೆಯಲ್ಲಿ ಮದು ವೆಯೂ, ಗಂಡನೂ ಸ್ವಪ್ನಪ್ರಾಯಗಳೇ ಸರಿ. ಈ ರೀತಿ ಬಾಡಿ, ಬಸವಳಿದಿರುವ ಅವಳನ್ನು ಹೇಗಾದರೂ ನನ್ನ ದಾರಿಗೆ ಎಳೆಯಬಹುದು. ಗಂಡನನ್ನೊಡಂಬಡಿಸಿಕೊಳ್ಳಬೇಕಾದರೆ ಎರಡು-ಮೂರು ದಿವಸಗಳು ಮುನಿದು ಉಪವಾಸ ಮಾಡಿದರೂ, ಮಾಡಿಸಿದರೂ ಆಯಿತು. ಸುಲಭವಾಗಿ ದಾರಿಗೆ ಬರುವನು. ಇನ್ನು ಮಗನ ವಿಚಾರವಾಗಿ ನೋಡುವುದಾದರೆ, ನನ್ನ ಮಾತನ್ನು ಗೆರೆ ದಾಟುವದಿಲ್ಲ. ಸರಿ. ನನ್ನ ಕೆಲಸವಾಯಿತು. ಇಲ್ಲಿಂದ ಭವಾನಿಪುರಕ್ಕೆ ಹೋಗುವುದು. ಅಲ್ಲೇ ನೆಲಿಸುವುದು. ಒಂದು ವರ್ಷಕಾಲ ಕಷ್ಟಪಟ್ಟು ಸಾಧನೆ ಮಾಡಿದೆನೆಂದರೆ, ನನ್ನ ಯುಕ್ತಿ

ಘಲಿಸುವುದು. ಆ ಹೊತ್ತಿಗೆ ಸುಂದರಪುರದವರಿಗೆ ಶರ್ಮನ ಸಂಸಾರದ ಕಲ್ಪನೆಯೇ ಮಾಯವಾಗುತ್ತದೆ. ಅವ್ಯಾಜವಾಗಿ ಬಂದರೂ, ಎಲ್ಲರೂ ಹಾಳಾದರೆಂದು ಕೊಳ್ಳುತ್ತಾರೆ. ಇಲ್ಲಿನ ಜನರಿಗೆ ಸುಂದರಪುರದ ಸಮಾಚಾರವೇನೆಂಬುದು ತಿಳಿಯದು. ಸರಿ. ಒಂದೇ ವರ್ಷದೊಳಗಾಗಿ ಮಾಧವನಿಗೂ ಕುಮುದೆಗೂ ಲಗ್ನ ಮಾಡಿಬಿಡುವುದು. ಹಾಗೆ ಮಾಡಿದರೆ, ಯಾವತ್ತು ಆಸ್ತಿಯೂ ನಮಗೇ ಸೇರುತ್ತದೆ. ಆ ಪರದೇಶಿ ಗಂಡನೆಂದೋ ಸತ್ತಿರಬೇಕು. ಇವಳು ವಿಧವೆಯಾದರೆ ನಮಗೇನು? ಹೊನ್ನು! ಅದಕ್ಕಿಂತಲೂ ಶ್ರೇಷ್ಠವಾವುದು?''

---

## [೧೦]




ಮುದಾ, ನನ್ನ ಮಾತನ್ನು ಕೇಳು. ಸುಖಪಡುವೆ.'

''ಧರ್ಮಕ್ಕೆ ವಿರುದ್ಧವಲ್ಲದ ಮಾತಾದರೆ ಏತಕ್ಕೆ ಕೇಳಕೂಡದತ್ತೆ?''

''ಆ ಧರ್ಮಾಧರ್ಮಗಳ ವಿಚಾರವು ನನಗಿಂತಲೂ ನಿನಗೆ ಹೆಚ್ಚು ಗೊತ್ತೋ?''

''ತಿಳಿದಮಟ್ಟಿಗೆ''

''ನನಗಿಂತಲೂ?''

''ಹೇಗೆ ಹೇಳಲು ಸಾಧ್ಯ?''

''ನಿನ್ನ ನಾಲ್ಕರಷ್ಟು ವಯಸ್ಸು ನನಗೆ; ಎಂದ ಮೇಲೆ ನಿನಗಿಂತಲೂ ಹೆಚ್ಚು ಪಾಲು ಅನುಭವಸ್ಥಳು ನಾನು. ನನ್ನ ಮಾ-

ತನ್ನು ಕೇಳು. ಅದರಿಂದ ನಿನಗೆ ಬಹಳ ಅನುಕೂಲವಾಗುವುದು."

"ಮೊದಲೇ ಹೇಳಿದೆನಲ್ಲ."

"ಆಗಲಿ. ಮುಂದೆ ನೀನು ಹೇಗೆ ಬದುಕಬೇಕೆಂದಿರುವೆ?"

"ಅದು ದೇವರ ನಿಯಾಮಕವಿದ್ದಂತೆ."

"ನಿನ್ನ ಉದ್ದೇಶ್ಯವನ್ನಾದರೂ ಅರುಹು."

"ನನಗೆ ತಿಳಿಯದು."

"ಹಾಗಾದರೆ ನಾನು ಹೇಳಿದಂತೆ ಕೇಳು."

"ಏನು ಹೇಳು."

"ಮಾಧವನನ್ನು ವರಿಸು."

"ಆ ಮಾತು ಹೇಳಲು ನಾಲಿಗೆ ಸೀಳುವುದು ಹೆಚ್ಚು."

"ಅಂತೂ ಸಾಧ್ಯವಿಲ್ಲವೋ?"

"ನನ್ನ ಯತ್ನವಿಲ್ಲ."

"ನೀನು ಬಹಳ ತೊಂದರೆಪಡುವೆ."

"ದೈವ ವಿಲಾಸವೆಂತಿಹುದೋ?"

"ನಿನ್ನ ದೈವವೇ ನಿನ್ನನ್ನು ನಿರ್ಮೂಲ ಮಾಡುವುದು."

"ಹಾಗೆ ನಾನು ಭಾವಿಸುವವಳಲ್ಲ."

"ಬೇಡ. ನನ್ನ ಮಾತನ್ನು ಕೇಳು. ಬಿಡು! ಬಿಟ್ಟುಬಿಡು!!"

'ಅದಂತೂ ಸಾಧ್ಯವಲ್ಲದ ಮಾತು. ದಯವಿಟ್ಟು ಬೇಡ.'

"ನೋಡು, ಕುಮುದ, ಅಪಾರವಾದ ಸಂಪತ್ತನ್ನನುಭವಿಸುತ್ತಾ ಮನಃಕ್ಲೇಶಗಳನ್ನು ತೊರೆದು ಶ್ರೀಮಂತಿಕೆಯನ್ನನುಭವಿಸ ಹೇಳಿದರೆ, ಭಿಕಾರಿಣಿಯಾಗಬಯಸುವೆ."

"ನೀನು ಏನೇ ಹೇಳು. ಆ ವಿಷಯ ಒಂದನ್ನು ಬಿಟ್ಟು ಮತ್ತಾವುದನ್ನಾದರೂ ಹೇಳು. ಅಗ್ನಿಸಾಕ್ಷಿಯಾಗಿ ಮದುವೆ

ಯಾದವರನ್ನು ಬಿಟ್ಟು, ಬೇರೆ ಲಗ್ನವಾಗುವುದೇ! ಅಯ್ಯೋ! ಅದಕ್ಕಿಂತಲೂ ವಿಷಪ್ರಾಶನವು ಲೇಸಲ್ಲವೆ?''

"ಹೋಗಲಿ, ಹಾಗಾದರೂ ಮಾಡು."

"ಅಂತಹ ಸನ್ನಿವೇಶವಿನ್ನೂ ಒದಗಲಿಲ್ಲ."

"ಹಾಗಾದರೆ ನಿನ್ನ ಗಂಡನಿನ್ನೂ ಜೀವಂತನಾಗಿರುವನೆಂದೇ ಭಾವಿಸುವೆಯಾ?"

"ಬದುಕಿರುವ ಗಂಡನನ್ನು ನೋಡುವ ವರೆಗೆ."

"ಇಲ್ಲವೆಂದು ತಿಳಿದು ಬಂದರೆ?"

"ವಿರಾಗಿಣಿಯಾಗುವೆನು."

"ಹಾಗಾಗಿ ನೀನು ಮಾಡುವುದಾದರೂ ಏನು?"

"ಮುಂದಿನ ಜನ್ಮಕ್ಕಾದರೂ ಪತಿಸಾನ್ನಿಧ್ಯವು ಲಭಿಸಲೆಂದು ಪರಮಾತ್ಮನನ್ನು ಧ್ಯಾನಿಸುವುದು."

"ಇದೆಲ್ಲವನ್ನೂ ನಿನಗೆ ಕಲಿಸಿದವರಾರು?"

"ಅವರಿದ್ದರೆ ನನಗೀ ಗತಿಯು ಎಲ್ಲಿ ಬರುತ್ತಿದ್ದಿತು?"

"ಕುಮುದಾ, ಇನ್ನು ನನ್ನ ಸೈರಣೆಯು ಅಳಿದು ಹೋಯಿತು. ಇನ್ನು ನನ್ನನ್ನು ಚಂಚಲೆಯೆಂದಾಗಲಿ, ನಿಮ್ಮತ್ತೆಯೆಂದಾಗಲಿ ತಿಳಿಯಬೇಡ. ನಿನ್ನ ಭಾಗದ ಮೃತ್ಯುವೆಂದೇ ತಿಳಿ."

'ಅತ್ತೆ, ನಿರಪರಾಧಿನಿಯಾದ ನನ್ನ ಮೇಲೇತಕ್ಕೆ ಕೋಪ?'

"ಬಾಯಿ ಮುಚ್ಚು! ಒಳ್ಳೆಯ ಮಾತಿಗೆ ಮಾಪಿನ ಹಣ್ಣು ಉದುರುವುದೇ?"

"...................."

"ಏನು ಮಾತಾಡದಿರುವೆ? ಈಗ ಹೇಳು. ನಾನು ಹೇಳಿದಂತೆ ಕೇಳುವೆಯೊ, ಇಲ್ಲವೋ?"

“ಅತ್ತೆ, ಕೋಪ ಮಾಡಬೇಡ. ನಿನಗೇತಕ್ಕೀ ದುರ್ಬುದ್ಧಿ ಹುಟ್ಟಿತು. ನಿನ್ನ ಇಂಗಿತವು ನನಗೆ ಗೊತ್ತಾಯಿತು. ನನ್ನ ಆಸ್ತಿಯೆಲ್ಲವನ್ನೂ ಬೇಕಾದರೆ ನೀನೇ ತೆಗೆದುಕೋ. ಆ ಒಂದು ವಿಷಯದಲ್ಲಿ ಮಾತ್ರ ನನ್ನನ್ನು ಕಾಪಾಡು.”

“ಮುಚ್ಚೇ ಬಾಯಿ! ನನಗೆ ಬುದ್ಧಿಗಲಿಸಲು ಬರುವಿಯಾ? ಹೇಳು. ಒಂದೇ ಮಾತು. ಮಾಡಿಕೊಳ್ಳುವಿಯೋ-ಇಲ್ಲವೋ?”

“ಇಲ್ಲ.”

“ಭ್ರಷ್ಟಳೆ, ಇಲ್ಲವೆ? ಅನುಭವಿಸು.”

“ಅಯ್ಯೋ! ಅಯ್ಯೋ!! ಬೇಡತ್ತೆ, ಕೊಲ್ಲಬೇಡ. ಆ ಚೂರಿಯನ್ನು ಮುಚ್ಚಿಡು. ಮಾಡಿಕೊಳ್ಳುವೆನು.”

—

## [೧೧]




ರು ಏನು ಮಾಡಲಿ, ಮಾಡದಿರಲಿ ಕಾಲ ಚಕ್ರವು ಮಾತ್ರ ಗಿರಗಿರನೆ ತಿರುಗುತ್ತಲೇ ಇರುತ್ತದೆ.

ಶ್ರೀಧರನು ಭವಾನಿಪುರಕ್ಕೆ ಬಂದು ವರ್ಷವಾಗುತ್ತಾ ಬಂದಿತು. ಹೆಂಡತಿಯ ಬೆಡಗು, ಬಿನ್ನಾಣ, ಕೋಪ, ತಾಪಗಳಿಗೆ ಪರವಶನಾದ, ಸಾಧುವಾದ ಅವನು ಆಕೆಯ ಮಾರ್ಗಕ್ಕೆ ಹೆಜ್ಜೆಯಿಟ್ಟನು. ಮಾಧವನಿಗೆ ಕುಮುದೆಯನ್ನು ಕೊಟ್ಟು ಲಗ್ನಮಾಡುವರೆಂದು ಯಾವಾಗ ತಿಳಿಯಿತೋ, ಆಗಿನಿಂದಲೂ ಅವನು ಕುಮುದೆಯಿದ್ದಲ್ಲಿಗೆ ಸಲ-ಸಲವೂ

ಹೋಗುವುದೂ, ಅಕಾರಣವಾಗಿ ಅವಳನ್ನು ಮಾತನಾಡಿಸು ವುದೂ, ನಗುವುದೂ, ತನ್ನ ಸಮಾನರಾರೂ ಇಲ್ಲವೆಂದು ಜಂಭ ಕೊಚ್ಚಿಕೊಳ್ಳುವದೂ, ಅಕಸ್ಮಾತ್ ಎದುರು ತಾಕಿದಂತೆ ಮಾಡು ವುದೂ, ಲಗ್ನವಾಗೆಂದು ಪೀಡಿಸುವುದೂ, ಪಾಪಪೂರಿತ ದೃಷ್ಟಿ-ವಚನಗಳಿಂದ ಹಾವಳಿ ಮಾಡುವುದೂ, ತನ್ನ ಮಾತಿನಂತೆ ನಡೆ ಯದೆ, ಆಗಲಿ ಲಗ್ನವಾಗಿರುವುದಾಗಿ ಆರೊಡನೆಯಾದರೂ ಹೇಳಿದುದಾದರೆ ಕೊಂದುಬಿಡುವುದಾಗಿ ಹೆದರಿಸುವುದೂ ಮುಂ-ತಾದಾಗಿ ದುರ್ವರ್ತನೆಯಿಂದ ನಡೆಯುತ್ತಿದ್ದನು. ಅವನ ಆ ಚೇಷ್ಟೆಗಳು ಕುಮುದೆಯ ಮನಸ್ಸಿನ ಮೇಲೆ ಕಪಿಚೇಷ್ಟೆ ಗಳಂತೆ ಪರಿಣಾಮವಾಗುತ್ತಿದ್ದುವು. ಅವಳು ಆವನನ್ನು ಕಣ್ಣೆತ್ತಿ ಸಹ ನೋಡುತ್ತಿರಲಿಲ್ಲ. ಅವನ ಹೆದರಿಕೆಗೆ ಆರೊಡ ನೆಯೂ ಮಾತನ್ನು ಸಹ ಆಡದೆ, ಕೇವಲ ಮೂಕಳಂತಿದ್ದಳು.

ಚಂಚಲೆಯ ಇದುಗಡೆಯಂತೂ ಬಹಳವಾಯಿತು. ಅಂತೂ ಕುಮುದೆಗೆ ಕಿರುಕುಳಗಳು ಹೆಚ್ಚಾಗಿ, ಅವಳಿಗೆ ಮನ ಸ್ಸಿಲ್ಲದಿದ್ದರೂ, ಮೂವರ ಹಿಡಿತವಲ್ಲಿ ನಜ್ಜು-ಗುಜ್ಜಾಗಿ, ಯತ್ನ ವಿಲ್ಲದೆ ತಲೆದೂಗಬೇಕಾಗಿ ಬಂದಿತು. ಅಬಲೆಯೂ, ಅನಾ ಥಳೂ ಆದ ಅವಳು ಮತ್ತೇನನ್ನು ತಾನೆ ಮಾಡಬಲ್ಲಳು?

ಕಡೆಗೆ ಮಾಧವನಿಗೆ ಕುಮುದೆಯನ್ನು ಕೊಟ್ಟು ವಿವಾಹ ಮಾಡುವುದಾಗಿ ತೀರ್ಮಾನವಾಯಿತು. ಲಗ್ನಮುಹೂರ್ತವೂ ನಿಶ್ಚಿತವಾಯಿತು. ಕ್ರಮೇಣ ಅದರ ಸಮಾರಂಭವೂ ಅತಿ ಸಂಭ್ರಮದಿಂದ ನಡೆಯಿತು.

ಚಂಚಲೆಯು ಆನಂದದಿಂದ ಉನ್ಮತ್ತಳಾದಳು. ಮಾಧವ ನಿಗೆ ಸ್ವರ್ಗವು ಮೂರೇ ಬೆರಳ ಅಂತರದಲ್ಲಿದ್ದಂತಿದ್ದಿತು. ಶ್ರೀಧ

ರನು ಮಾತ್ರ ಹರ್ಷಚಿತ್ತನಾಗಿಯೇ ಇದ್ದನಾದರೂ, ಹೃದಯದಲ್ಲಿನ ಅಂತರಾತ್ಮನು ಏನೋ ಗದ್ದಲ ಮಾಡುತ್ತಿದ್ದನು. ಆ ಗದ್ದಲವಿಂತಹದೆಂದು ಹೇಳಬರುವುದಿಲ್ಲ. ಅಂತಹ ಒಂದು ವೇದನೆಯನ್ನು ಅಂತರಂಗದಲ್ಲಿಯೇ ಅನುಭವಿಸುತ್ತಿದ್ದನು.

ಭವಾನಿಪುರವು ಅಷ್ಟು ದೊಡ್ಡ ಪಟ್ಟಣವಲ್ಲದಿದ್ದರೂ, ಹಳ್ಳಿಯಾಗಿರಲಿಲ್ಲ. ಅದು ಒಂದು ತಾಲ್ಲೂಕಾಗಿದ್ದಿತು. ನ್ಯಾಯಶಾಖೆ, ದಂಡಶಾಖೆ, ವಿದ್ಯಾಶಾಖೆ, ವೈದ್ಯಶಾಖೆ, ವಿಚಾರಣಸಮಿತಿ, ಪೌರಕಾರ್ಯ ನಿರ್ವಾಹಕ ಸಮಿತಿ ಮೊದಲಾದವುಗಳಿಂದ ಪೋಷಿಸಲ್ಪಟ್ಟದ್ದಿತು. ಊರಿನ ಮುಖ್ಯಾಧಿಕಾರಿಗಳ ಹಾಗು ಶ್ರೀಮಂತರ ಭವನಗಳಿಂಲೂ, ಇತರ ಸಾರ್ವಜನಿಕ ಸಂಸ್ಥೆಯ ಕಟ್ಟಡಗಳಿಂದಲೂ ಊರು ಅಲಂಕಾರವಾಗಿಯೇ ಇದ್ದಿತು.

ಕೇವಲ ಸಿರಿವಂತರೇ ಬಹು ಮಂದಿ ಶ್ರೀಧರನ ಮನೆಯ ಮದುವೆಗೆ ಆಹ್ವಾನಿಸಲ್ಪಟ್ಟರು; ಏಕೆಂದರೆ, ಕುಮುದೆಯ ಆಸ್ತಿಯಿಂದ ಶ್ರೀಧರನೊಬ್ಬ ಶ್ರೀಮಂತನಂತೆ ಗಣಿಸಲ್ಪಡುತ್ತಿದ್ದನು. ಜನರು ನೋಡುವುದು ಬಾಹ್ಯಾಡಂಬರವನ್ನಲ್ಲದೆ, ಅಂತರ್ಯದ ಸುಖದುಃಖಗಳನ್ನಲ್ಲ!

---

## [೧೨]



ಸಣ್ಣದಾದ ಅಚ್ಚುಕಟ್ಟಾದ ಚಪ್ಪರ; ಸ್ವಲ್ಪ ಆಡಂಬರವಾಗಿ ರಚಿಸಿದ್ದ ಲಗ್ನಮಂಟಪ; ಹೆಚ್ಚು ಜನರಿಲ್ಲದ ಸಮೂಹ ಇತ್ಯಾದಿಗಳಿಂದ ಶ್ರೀಧರಶರ್ಮನ ಮಗನ ಮದುವೆಯು ನಡೆಯತೊಡಗಿದ್ದಿತು.

ಮುಖ್ಯಾಧಿಕಾರಿಗಳಿಗೆಂದೂ ಶ್ರೀಮಂತರಿಗೆಂದೂ ಒಂದು ಭಾಗವು, ಸಾಧಾರಣ ದರ್ಜೆಯ ಖಾಸಗೀ ಜನರಿಗೆಂದು ಒಂದು ಭಾಗವು ಕೂಡಲು ಸ್ಥಳವೇರ್ಪಟ್ಟಿದ್ದಿತು. ಖಾಸಗೀ ಜನರು ಬಹಳ ಕಡಿಮೆಯಾಗಿದ್ದರೆಂದು ಹೇಳಬಹುದು. ಅಧಿಕಾರ ವರ್ಗ ದವರಿಗೇರ್ಪಡಿಸಿದ್ದ ಸ್ಥಾನವು ಲಗ್ನಮಂಟಪದ ಮುಂಭಾಗ ವಾಗಿದ್ದಿತು. ಸುವಾಸಿನಿಯರಿಗೂ ತಕ್ಕ ಸ್ಥಳವೇರ್ಪಾಟಾಗಿದ್ದಿ ತೆಂದು ಹೇಳಬೇಕಾಗಿಲ್ಲ.

ನಾಟಕದಲ್ಲಿನ ಸೂತ್ರಧಾರನಂತೆ ಲಗ್ನಮಂಟಪದ ರಂಗ ಸ್ಥಳಕ್ಕೆ ಸಂಭ್ರಮಾತುರಗಳಿಂದಲೂ ನಗೆಮೊಗದಿಂದಲೂ ವರನ ಪ್ರವೇಶವಾಯಿತು. ವಧುವು ಬೇಗನೆ ಬರಲಿಲ್ಲ. ಯಾರು ಎಷ್ಟು ಹೇಳಿದರೂ ಬರಲಿಲ್ಲ. ಕೆಲವು ಜನ ಹೆಂಗಸರು: "ಹುಡು ಗಿಗೆ ಬಹು ನಾಚಿಕೆಯೆಂದೂ, ಇಷ್ಟು ನಾಚಿದರೆ ಹೇಗಮ್ಮಾ?" ಎಂದೂ, ಕೆಲವರು ಇನ್ನೂ ಅನೇಕ ವಿಧವಾಗಿಯೂ ಹೇಳಲು ಷುರು ಮಾಡಿದರು. ಕಡೆಗೆ ಚಂಚಲೆಯು ಕೋಪಗೊಂಡು ಕಣ್ಣು ಗಳನ್ನು ದೊಡ್ಡವಾಗಿ ಮಾಡಿ, ದುರದುರನೆ ನೋಡುತ್ತ ದರ್ಪೋ ಕ್ತಿಯಿಂದ ಹೂಂಕರಿಸಿದಳು. ಸಾಧಕದ ಮೃಗದಂತೆ ಕುಮು ದೆಯು ರಂಗಸ್ಥಳಕ್ಕೆ ಬಂದಳು. ಅವಳ ಮುಖವನ್ನು ನೋಡಿ ದೊಡನೆಯೇ, ಎಂತಹ ಕಲ್ಲೆದೆಯವನಿಗಾದರೂ ಒಂದು ವಿಧ ವಾದ ಕರುಣಾರಸವು ದ್ರವಿಸುತ್ತಿದ್ದಿತು. ಕುಮುದೆಯು ತಲೆ ಬಾಗಿಸಿಕೊಂಡು ಬಗೆಬಗೆಯ ಯೋಚನೆಗಳಲ್ಲಿ ತೊಡಗಿದಳು. ಆಗ ಅವಳಿಗೆ ತಾನೆಲ್ಲಿರುವೆನೆಂಬುದರ ಪರಿವೆಯೇ ಇರಲಿಲ್ಲ. ಅವಳ ಸ್ಥಿತಿಯು ಕಡು ಕಠಿಣವಾಗಿದ್ದಿತು. ಪ್ರಾಣಬಿಡುವುದೇ ಸರಿಯೆಂದು ತೀರ್ಮಾನಿಸಿದಳು; ಆದರೆ ಅದು ಅಷ್ಟು ಸುಲಭ

ವಾದದ್ದಲ್ಲ. ಜನರ ಮಧ್ಯದಲ್ಲಿ ತೂರಿ ಓಡಿ ಹೋಗೋಣ ವೆಂದುಕೊಂಡಳು. ಮರುಕ್ಷಣದಲ್ಲಿಯೇ: "ಅಷ್ಟು ಸಾಹಸವು ನನ್ನಲ್ಲಿರುವುದೆ?" ಎಂದು ತಾನೇ ಪ್ರಶ್ನಿಸಿಕೊಂಡಳು. ಈಗ ಅದಕ್ಕಿಂತಲೂ ಉಪಾಯವಾದ ಮಾರ್ಗವೇ ಇಲ್ಲವೆಂದು ಗೊತ್ತಾ ಯಿತು. ಒಂದುವೇಳೆ ಹೋದರೆ, ಎಲ್ಲಿಗೆ ಹೋಗಬೇಕು? ಈ ಪಿಶಾಚಿಗಳು ಬಿಡುವರೇ? ಮುಂತಾದ ಯೋಚನಾತರಂಗಗಳು ಒಂದರ ಹಿಂದೊಂದು ಬರತೊಡಗಿದುವು. ಚಿಕ್ಕದಾದ ತಲೆಯ ಮೆದುಳಿನಲ್ಲಿ ನಾನಾ ತರಂಗಗಳು ನಾಟ್ಯವಾಡತೊಡಗಿದುವು. ಮೆದುಳಿಗೆ ಮಿತಿಮೀರಿದ ದುಃಖಜನಕವಾದ ಯೋಚನಾ ಭಾರವು ಹೆಚ್ಚಿತು. ಮಧ್ಯೆ ಮಧ್ಯೆ ಯೋಚನೆಯು ಹರಿಯದೆ ಭಂಗಬರುತ್ತಿದ್ದಿತು. ಯೋಚನೆಯೆಂಬ ತೂಕದ ಭಾರವು ವಿಶೇಷವಾಯಿತು. ಕಡೆಗೆ ಯೋಚನೆಯು ಹರಿಯದೆ ಹೋಗಿ, ಒಂದು ವಿಕೃತಾಕಾರವಾದ ಮನಸ್ಸೇರ್ಪಟ್ಟಿತು. ಅದೊಂದು ವಿಧವಾದ ಹುಚ್ಚು. ಕುಮುದೆಯು ಆ ವಿಧವಾದ ಹುಚ್ಚಳಾದಳು. ಹಾಗೆಯೇ ಕತ್ತೆತ್ತಿ ನೋಡಿದಳು. ಅನೇಕ ಜನ ಅಧಿಕಾರಿ ಪುರುಷರು ಕಾಣಿಸಿದರು. ಹಾಗೆಯೇ ನೋಡುತ್ತಿದ್ದಳು. ನೋಡು ತ್ತಿದ್ದ ಹಾಗೆಯೇ ಅವಳ ಮುಖವು ರೂಪಾಂತರವನ್ನು ಹೊಂ ದಿತು. ಕಣ್ಣಿನಲ್ಲಿ ಅಶ್ರುವಾರಿಯು ತನಗೆ ತಾನೇ ಬರತೊಡ ಗಿತು. ಇದ್ದಕ್ಕಿದ್ದಂತೆಯೇ ಕಡಿದ ಬಾಳೆಯ ಗಿಡದಂತೆ ಧೊಪ್ಪನೆ ನೆಲಕ್ಕುರುಳಿದಳು!

ಜನಸಮೂಹದಲ್ಲಿ ಗೊಂದಲವೆದ್ದಿತು. ಒಬ್ಬರ ಮಾತು ಮತ್ತೊಬ್ಬರಿಗೆ ಕೇಳಿಸದು. "ದೃಷ್ಟಿ" ಎಂದು ಕೆಲವರೂ, 'ವಾಯು'ವೆಂದು ಕೆಲವರೂ, ತಮ ತಮಗೆ ತೋಚಿದಂತೆ ಆಡಿ

ಕೊಳ್ಳಲಾರಂಭಿಸಿದರು. ಕಡೆಗೆ ವೈದ್ಯರು ಬಂದರು. ಅದರ ತೀರ್ಮಾನವು "ಮಿತಿ ಮೀರಿದ ಆನಂದದಿಂದ ಜ್ಞಾನ ತಪ್ಪಿದೆ!" ಎಂಬುದಕ್ಕೆ ಬಂದಿತು. ಆ ಆನಂದವೆಂತಹುದೆಂಬುದು ಪೂರ್ವರಿಗೆ ಮಾತ್ರ ಗೊತ್ತು. ವೈದ್ಯರ ಮಾತು ಸರಿಬಾರದಿದ್ದರೂ, ಆ ಸಂದರ್ಭದಲ್ಲಿ ಆ ಮಾತೇ ಅವರಿಗೆ ಪೂರ್ಣ ಸಹಕಾರಿಯಾಯಿತು. ದೊಡ್ಡ ದೊಡ್ಡವರೆಲ್ಲಾ ಅವರ ಮಾತಿಗೇ ತಾಳ ಹಾಕಿದರು. ವೈದ್ಯರೂ ಕೊಂಚ ಚಿಕಿತ್ಸೆ ನಡಿಸಿ ಹೊರಟು ಹೋದರು. ಲಗ್ನಕ್ಕೆ ಬಂದಿದ್ದವರೆಲ್ಲರೂ, ಒಬ್ಬೊಬ್ಬರಾಗಿ ಹೊರಟು ಹೋದರೆಂದು ಹೇಳಬೇಕಾಗಿಲ್ಲ. ವಿವಾಹವು ಅಷ್ಟಕ್ಕೇ ನಿಂತಿತು.

## [೧೩]




ಮುದೆಗೆ ಪಿಶಾಚ ಹಿಡಿದಿರುವದಾಗಿ ಮಾರನೆ ದಿನ ಊರಲ್ಲೆಲ್ಲಾ ಹರಡಿತು. ಕಡೆಗೆ ಸಿದ್ಧರ ಮಾಡಿದುದೂ ಅದನ್ನೇ.

ಶ್ರೀಧರನು ಅಪಾರಯೋಚನೆಯಲ್ಲಿ ಮಗ್ನನಾಗಿ ತಲೆ ಮೇಲೆ ಕೈ ಹೊತ್ತು ಹಜಾರದಲ್ಲಿ ಕುಳಿತಿದ್ದನು. ಚಂಚಲೆಯ ಮನೋಗತವನ್ನು ವರ್ಣಿಸಲು ಬಾರದು. ಮಾಧವನು ಕೊರಗುತ್ತಾ ಒಂದು ಹಾಸಿಗೆಯ ಮೇಲೆ ಮಲಗಿದ್ದನು. ಕೊಠಡಿಯೊಂದರಲ್ಲಿ ಕುಮುದೆಯು ಬಂಧಿತಳಾಗಿದ್ದಳು.

ವಿಭೂತಿ ರುದ್ರಾಕ್ಷಿಗಳನ್ನು ಧರಿಸಿ, ಕಾಷಾಯ ವಸ್ತ್ರ ಭೂಷಿತನಾಗಿ, ಕಮಂಡಲು-ಕೃಷ್ಣಾಜಿನಗಳನ್ನು ಕೈಲಿ ಹಿಡಿದು

ದೀರ್ಘಕಾಯನಾದ ಸಂನ್ಯಾಸಿಯೋರ್ವನು ಶ್ರೀಧರನ ಮುಂದೆ ಪ್ರತ್ಯಕ್ಷನಾದನು.

ಬೇಸರದಿಂದ ಶ್ರೀಧರನು "ಯಾರು, ತಾವು?" ಎಂದು ಪ್ರಶ್ನೆ ಮಾಡಿದನು.

ಸಂನ್ಯಾಸಿ:—"ಕಾಣುವುದಿಲ್ಲವೆ?"

ಶ್ರೀಧರ:—"ತಮ್ಮ ಸ್ಥಳ?"

ಸಂನ್ಯಾಸಿ:—"ಸಂನ್ಯಾಸಿಗಳಿಗೆ ಒಂದು ಸ್ಥಳವೆ?"

ಶ್ರೀಧರ:—"ತಾವು ಬಂದ ಕಾರಣ?"

ಸಂನ್ಯಾಸಿ:—"ಅದೇ ಹೇಳುತ್ತೇನೆ. ತಮ್ಮ ಮನೆಯಲ್ಲಿ ಒಬ್ಬ ಹುಡುಗಿಗೆ ಭೂತಚೇಷ್ಟೆ ಇದೆಯೆಂದು ಹಲವರು ಹೇಳಿದರು. ತಾವು ಒಪ್ಪಿಗೆಯಿತ್ತರೆ, ಅದನ್ನು ನಿವಾರಣೆ ಮಾಡಲು ಬಂದೆವು."

ಶ್ರೀಧರ:—"ತಾವು ಮಂತ್ರವಾದಿಗಳೇನು?"

ಸಂನ್ಯಾಸಿ:—"ನಮಗೆ ಆ ಬಾರದ ವಿದ್ಯೆಯಿಲ್ಲ. ಅದನ್ನು ಸತ್ಕಾರ್ಯಕ್ಕಲ್ಲದೆ ಅನ್ಯಥಾ ಉಪಯೋಗಿಸಕೂಡದೆಂದು ನಮ್ಮ ಗುರುಗಳವರ ಅಪ್ಪಣೆಯಾಗಿರುತ್ತದೆ."

ಶ್ರೀಧರ(ಶಾಂತಭಾವದಿಂದ):—"ಆಹಾ! ತಮ್ಮ ಗುರುಗಳೆಷ್ಟು ಧಾರ್ಮಿಕರು! ತಾವೆಷ್ಟು ಪುಣ್ಯಶಾಲಿಗಳು! ಈ ಖಾಯಿಲೆ ಗುಣಪಡಿಸಿದ್ದಕ್ಕೆ ತಮಗೇನು ಕೊಡಬೇಕು?"

ಸಂನ್ಯಾಸಿ:—"ನಾವು ಹೇಳುವುದು ತಮಗೆ ಅರ್ಥವಾಗಲಿಲ್ಲವೆಂದು ತೋರುತ್ತದೆ. ಕ್ಷಣಿಕ ಸುಖಪ್ರದಗಳಾದ ದ್ರವ್ಯಾದಿಗಳು ನಮಗೆ ಮಣ್ಣು-ಹೆಂಟೆಗೆ ಸಮಾನ. ನಾವು ಯಾವುದನ್ನೂ ಪ್ರತಿಫಲರೂಪವಾಗಿ ಗ್ರಹಣಮಾಡುವುದಿಲ್ಲ."

ಶ್ರೀಧರನು ಕೂಡಲೆ ಎದ್ದು ಸಾಷ್ಟಾಂಗ ದಂಡಪ್ರಣಾಮ ಮಾಡಿ, "ಸ್ವಾಮಿ, ತಾವು ಯಾರೋ? ಎಂದು ತಿಳಿಯದ್ದೆನು. ಸದ್ಗುಣದನಿಧಿಗಳಾದ ತಮ್ಮ ಪ್ರಕಾಶವು ಈಗೀಗ ಆಗುತ್ತಿದೆ. ಸತ್ಕರಿಸಲು ಅವಕಾಶವಾದುದಕ್ಕೆ ದಯವಿಟ್ಟು ಕ್ಷಮಿಸ ಬೇಕೆಂದು ಬೇಡುತ್ತೇನೆ" ಹೀಗೆಂದು ಹೇಳಿಕೊಳ್ಳುತ್ತಿದ್ದಂತೆಯೇ ಇದನ್ನೆಲ್ಲ ಕೇಳುತ್ತಿದ್ದ ಚಂಚಲೆಯು ರಭಸದಿಂದ ಬಂದು ಸಂನ್ಯಾಸಿಗೆರಗಿ, "ದಯಮಾಡಬೇಕು" ಎಂದು ಹೇಳುತ್ತಾ, ಪೀಠವನ್ನು ತಂದುಹಾಕಿದಳು. ಉಪಚಾರದ ಮಾತುಗಳಾದ ನಂತರ ಕುಮುದೆಯನ್ನು ನೋಡಲು ಸಂನ್ಯಾಸಿಯು ಆಕೆಯಿದ್ದ ಕೊಠಡಿಗೆ ಹೋದನು. ಆಗಿನ ಆಕೆಯ ಸ್ಥಿತಿಯು ಕೇವಲ ವರ್ಣನಾತೀತವಾಗಿದ್ದಿತು. ತಲೆಗೂದಲು ಕೆದರಿದ್ದಿತು. ಅಸಂಬದ್ಧವಾದ ಮಾತುಗಳನ್ನು ಹೇಳಿಕೊಳ್ಳುತ್ತಿದ್ದಳು. ಒಮ್ಮೊಮ್ಮೆ ಕೋಪಿಸಿಕೊಂಡವಳಂತೆ ಮುಖವನ್ನು ಮಾಡುವಳು. ರೆಕ್ಕೆ ಮುರಿದ ಹಕ್ಕಿಯಂತೆ ಪ್ರಜ್ಞಾಶೂನ್ಯಳಾಗಿ ಶತಪಥ ಮಾಡುತ್ತಿದ್ದಳು. ಆ ಉನ್ಮಾದಾವಸ್ಥೆಯಲ್ಲಿದ್ದ ಕುಮುದೆಯನ್ನು ನೋಡಿ, ಸಂನ್ಯಾಸಿಯು ಶ್ರೀಧರನನ್ನು ಕುರಿತು: "ಇದು ಕೇವಲ ಡಾಕಿನಿ ಆವಾಹನೆ. ಇದನ್ನು ಬಿಡಿಸಬೇಕಾದರೆ ಕೊಂಚ ಶ್ರಮಪಡಬೇಕಾಗಿದೆ. ಹದಿನೈದು ದಿವಸಗಳ ಮಂತ್ರ-ಪುನಶ್ಚರಣೆಯಿಂದ ಈ ಪಿಶಾಚವು ಬಿಟ್ಟು ಹೋಗುವದು" ಎಂದು ಹೇಳಿದನು. ಶ್ರೀಧರನು, "ಸ್ವಾಮಿ, ನನ್ನಿಂದೇನಾಗಬೇಕಾಗಿದೆ ಹೇಳಿ. ದಯವಿಟ್ಟು ಈ ಪಿಶಾಚವನ್ನು ತೊಲಗಿಸಿ."

ಸಂನ್ಯಾಸಿ:—"ಈ ಮನೆಗೆ ಕೊಂಚ ದೂರದಲ್ಲಿರುವ ಒಂದು ಕೊಠಡಿಯಾಗಬೇಕು. ಮೊದಲು ಆ ಕೊಠಡಿಗೆ ಅಷ್ಟ

ದಿಗ್ಬಂಧನೆಯನ್ನು ಮಾಡಬೇಕು. ಆ ಮನೆಯೊಳಕ್ಕೆ ಹದಿನೈದು ದಿವಸಗಳ ವರೆವಿಗೂ ನೀವಾಗಲಿ, ನಿಮ್ಮ ಭಾರ್ಯೆಯಾಗಲಿ, ಯಾರೇ ಆಗಲಿ ಪ್ರವೇಶಿಸಕೂಡದು. ದಿವಸಕ್ಕೆ ಒಂದು ಗಂಟೆಯ ಹೊತ್ತು ಮಾತ್ರ ನಾನು ಬಂದು ಮಂತ್ರಿಸಿ ಹೋಗುತ್ತೇನೆ. ಉಳಿದ ವೇಳೆಯಲ್ಲಿ ಗ್ರಹಗಳ ಸಂಬಂಧವಾಗಿ ನಾನು ಬೇರೆ ಕೆಲಸ ಮಾಡಬೇಕಾಗಿದೆ. ನಾನು ಬರುವುದಕ್ಕಾಗಲಿ, ಹೋಗುವುದಕ್ಕಾಗಲಿ ಯಾರೂ ಕಾಯಬೇಕಾಗಿಲ್ಲ; ಅಲ್ಲದೆ ನನ್ನನ್ನು ಒಂದು ಉದ್ಧರಣೆಯಷ್ಟು ಉದುಕವನ್ನು ಸಹ ತೆಗೆದುಕೊಳ್ಳೆಂದು ಯಾರೂ ಬಲವಂತಪಡಿಸಕೂಡದು. ಒಂದು ಸೇರಿನ ಮಂತ್ರಾಕ್ಷತೆ, ಒಂದು ಪಾವು ಅರಿಸಿನ, ಕುಂಕುಮವೊಂದು ಪಾವು ಇಷ್ಟು ಮಾತ್ರ ನನ್ನ ವಶಕ್ಕೆ ಕೊಟ್ಟರೆ ಸಾಕು. ಹದಿನೈದು ದಿವಸಗಳೊಳಗಾಗಿ ನಿಮ್ಮ ಸಮೀಪಕ್ಕೆ ಜ್ಞಾನವತಿಯಾದ ಈ ಹುಡಿಗೆಯನ್ನು ತಂದುಬಿಡದಿದ್ದರೆ, ನನ್ನ ತಲೆಯನ್ನು ಕತ್ತರಿಸಿಸುವೆನು. ತಮಗೆ ಒಪ್ಪಿಗೆಯಿದ್ದರೆ ತಿಳಿಸಿ; ಇಲ್ಲವಾದರೆ ನಾಳೆಯೇ ಪ್ರಯಾಣಬೆಳಿಸಲಾಗುತ್ತದೆ.''

ಶ್ರೀಧರ-ಚಂಚಲೆಯರು, ''ದೇವರೇ ಸಂನ್ಯಾಸಿರೂಪದಿಂದ ಬಂದಿರಬಹುದು'' ಎಂದು ಭಾವಿಸಿದರು; ಏಕೆಂದರೆ, ಅವನ ನಡೆ, ನುಡಿಗಳಲ್ಲಿ ಒಂದಾದರೂ ಸ್ವಾರ್ಥಪರತೆಯು ಮಾತು ಕಾಣಿಸಲಿಲ್ಲ. ಅನಂತರ ದಂಪತಿಗಳು ಪುನಃ ಪುನಃ ಸಂನ್ಯಾಸಿಗೆ ವಂದಿಸಿ, ''ತಮಗೆ ಬೇಕಾದ ಎಲ್ಲಾ ಸಿದ್ಧತೆಗಳನ್ನೂ ಶೀಘ್ರದಲ್ಲಿಯೇ ಮಾಡಿ ಕೊಡುತ್ತೇವೆ'' ಎಂಬುದಾಗಿ ಹೇಳಿದರು.

## [೧೪]



ಭವಾನಿಪುರದ ಪಶ್ಚಿಮಭಾಗದಲ್ಲಿ ಪುರಪಾಲಕ ಸಂಘದವರಿಂದ ನಿರ್ಮಿಸಲ್ಪಟ್ಟ ಸುಂದರೋದ್ಯಾನವೊಂದುಂಟು. ಮಲ್ಲಿಗೆ, ಜಾಜಿ, ಪುನ್ನಾಗ, ಪಾರಿಜಾತ, ಬಕುಳ, ಇರುವಂತಿಗೆ, ಗುಲಾಬಿ ಮೊದಲಾದ ಪುಷ್ಪಜಾತಿಯ ಗಿಡ-ಬಳ್ಳಿಗಳೂ, ಹಲವು ಫಲವೃಕ್ಷಗಳೂ ಅಲ್ಲಲ್ಲಿ ಕಂಗೊಳಿಸುತ್ತಿದ್ದುವು. ಭೂಪ್ರದೇಶವು ಗರಿಕೆ-ಹುಲ್ಲುಗಳಿಂದ ಹಸುರಾಗಿ, ಕಣ್ಣಿಗೆ ಹಬ್ಬವನ್ನುಂಟು ಮಾಡುತ್ತಿದ್ದಿತು. ಅಲ್ಲಲ್ಲಿ ಲತಾಗೃಹಗಳೂ, ವಿಹಾರ ಮಂದಿಗಳೂ, ಶಿಲಾಸನಗಳೂ ಕಲ್ಪಿತವಾಗಿದ್ದುವು. ಉದ್ಯಾನವನದ ಮಧ್ಯ ಭಾಗಕ್ಕೆ ಸರಿಯಾಗಿ ಒಂದು ಪುಷ್ಕರಣಿಯಿದ್ದಿತು. ಅದರ ಸುತ್ತಲೂ ಶಿಲಾತಲ್ಪಗಳು ನಿರ್ಮಿತವಾಗಿದ್ದುವು. ಹಗಲಿನಿಂ ನಿಂವಲೂ, ಕೆಲಸದಲ್ಲಿ ತೊಡಗಿದ್ದ ಜನರು ಸಾಯಂ ಸಮಯದಲ್ಲೊಮ್ಮೆ ಆ ವನದಲ್ಲಿ ವಿಹರಿಸಿ ಹೋದರೆ ಮನಸ್ಸಿಗೆ ಎಷ್ಟೋ ನೆಮ್ಮದಿಯಾಗುತ್ತಿದ್ದಿತು.

ರಾತ್ರೆ ಸುಮಾರು ಹತ್ತು ಘಂಟೆಗಳಿರಬಹುದು. ಇಬ್ಬರು ಪುರುಷರು ಮಾತ್ರ ಪುಷ್ಕರಣಿಯ ಅಂಚಿನಲ್ಲಿ, ಶಿಲಾತಲ್ಪದ ಮೇಲೆ ಮಾತನಾಡುತ್ತಾ ಕುಳಿತಿದ್ದವರು, ಇನ್ನೂ ಮೈ ಮರೆತು ಮಾತನಾಡುತ್ತಲೇ ಇದ್ದರು. ಅವರ ಸಂಭಾಷಣೆಯು ಈ ರೀತಿಯಾಗಿದ್ದಿತು:

‹‹ಅದು ಖಂಡಿತವಾಗಿಯೂ ಭೂತವೂ ಅಲ್ಲ, ಪಿಶಾಚಯೂ ಅಲ್ಲ; ಮನಃ ಕ್ಲೇಶದಿಂದುಂಟಾದ ನಿರಾಶೆಯ ಹುಚ್ಚು.”

"ಇನ್ನಾವ ರೀತಿ ಅದು ಗುಣವಾಗಬೇಕು?"

"ಆಶೆಯುಂಟಾಗುವಂತೆ ಮಾಡಬೇಕು."

"ಬುದ್ಧಿಯಿಲ್ಲದವರಿಗೆಂತಹ ಆಶೆ?"

"ಬುದ್ಧಿಯಿದ್ದವರಿಗೆ ನಾನು ಹೇಳಿದುದು."

"ಹಾಗಾದರೆ ಬುದ್ಧಿಯಿರುವದೆಲ್ಲಿ?"

'ನಿಮಗೆ ಕೊಂಚ ಅದೇ ರೀತಿಯ ಹುಚ್ಚು ಹಿಡಿದಂತಿದೆ.'

"ಏನು, ಹೀಗೆ ಹಾಸ್ಯ ಮಾಡುವೆ?"

"ಹಿಂದಿನ ನಾಲ್ಕು ದಿವಸಗಳಿಗಿಂತಲೂ, ಈ ದಿನ ಸಾವಿರ ಪಾಲು ವಾಸಿ."

"ನನಗೊಂದೂ ತಿಳಿಯುವುದಿಲ್ಲ."

"ಖಂಡಿತವಾಗಿಯೂ ಇನ್ನು ಕೆಲವು ದಿವಸಗಳಿಗೆ ಆ ಹುಚ್ಚು ಹಿಡಿದೇ ಹಿಡಿಯುತ್ತದೆ.

'ಒಂದು ವೇಳೆ ಹಿಡಿದರೂ, ಬಿಡಿಸಲು ನೀನಿರುವೆಯಲ್ಲಾ!'

"ಆ ಹುಚ್ಚು ಬಿಡಿಸಲು ನನ್ನಿಂದ ಸಾಧ್ಯವಿಲ್ಲ."

"ಈ ಹುಚ್ಚಿಗಿಂತಲೂ, ಆ ಹುಚ್ಚು ಅಧಿಕವಾದುದೆ?"

"ಈ ಹುಚ್ಚೂ ಆ ಹುಚ್ಚೂ ಒಂದೇ ಜಾತಿಗೆ ಸೇರಿದವುಗಳಾದರೂ, ಅದರಲ್ಲಿ ಕೆಲವು ಒಳಜಾತಿಗಳಿವೆ. ಈ ಹುಚ್ಚಿಗಾಗಿ ಯಾರು ಹುಚ್ಚರಾಗುವರೋ, ಅವರನ್ನು ಆಧಾರಭೂತರನ್ನಾಗಿಟ್ಟುಕೊಂಡು ಈ ಹುಚ್ಚು ಬಿಡಿಸಬಹುದು. ಆ ಹುಚ್ಚನ್ನು ಇತರರ ಸಹಾಯವಿಲ್ಲದೆ ಈ ಹುಚ್ಚೇ ಬಿಡಿಸುವುದು."

"ಕಡೆಗೂ ಹಾಸ್ಯವೇ?"

"ಆದರೂ ತಾವು ಕೋಪ ಮಾಡಿಕೊಳ್ಳುವುದಿಲ್ಲವಲ್ಲ!"

"ಅದಕ್ಕೇನು, ಮಾಡಿಕೊಳ್ಳೋಣ? ಏನು ಸವೆಯಬೇಕಾ

ಗಿದೆ? ನನ್ನ ಕೋಪವು ನಿನ್ನ ಮೇಲೆ ಪರಿಣಾಮಕಾರಿಯಾಗು ವಷ್ಟು ಮತ್ತಾರ ಮೇಲೂ ಆಗುವುದಿಲ್ಲ.''

''ಹಾಗಾದರೊಮ್ಮೆ ಮಾಡೋಣಾಗಲಿ.''

''ಜಾಗ್ರತೆ ಗುಣಪಡಿಸದೆ ಹೋಗು; ಆಗ ತಿಳಿಯುವದು.'

''ತಾವು ಧೈರ್ಯಸ್ಥರಾಗಿ, ಇತರರಿಗೂ ಹೇಳುವವರಾಗಿ ಈ ರೀತಿ ಚಪಲರಾದರೆ ಗತಿಯೇನು? ಸ್ವಲ್ಪ ಸಮಾಧಾನಿಸಿ. ಇನ್ನು ಮೂರು-ನಾಲ್ಕು ದಿವಸಗಳೊಳಗಾಗಿ ನೋಡುವಿರಂತೆ. ಕೋಪ ಮಾಡುವಿರೋ, ಕೃಪೆ ಮಾಡುವಿರೋ?''

''ಆಗಲಿ, ಏನೇನು ಮಾಡುವಿಯೋ, ಮಾಡು. ಮತ್ತೇನಾದರೂ ಖರ್ಚಿಗೆ ಬೇಕೇನು?''

''ಇತರ ವೈದ್ಯರನ್ನು ಕೇಳಿದಂತೆ ನನ್ನನ್ನು ಕೇಳುವಿರಲ್ಲಾ! ಇದೆಂತಹ ಹುಚ್ಚು? ಸದ್ಯಕ್ಕೇನೂ ಬೇಡ. ಈಗ ಮಾಡುತ್ತಿರುವ ಚಿಕಿತ್ಸೆಯೇ ಸಾಕು.''

'ಹೊಟ್ಟೆಯೊಳಕ್ಕೆ ಔಷಧವಿಲ್ಲ-ಪಥ್ಯವಿಲ್ಲ. ಒಳ್ಳೇ ವೈದ್ಯ!'

''ನಮ್ಮ ವೈದ್ಯವೇನಿದ್ದರೂ ಯಂತ್ರಗಳಿಂದಲೂ ಮಂತ್ರಗಳಿಂದಲೂ ತಂತ್ರಗಳಿಂದಲೂ ಗುಣವಾಗುವುದಲ್ಲ.''

''ಅಷ್ಟು ನಿಂಬೇಹಣ್ಣಿನ ರಸವನ್ನು ತಲೆಗೆ ತಿಕ್ಕಿ, ಲೆಕ್ಕವಿಲ್ಲದಷ್ಟು ಕೊಡ ತಣ್ಣೀರು ಸುರಿದರೆ ಶೀತವಾಗುವುದಿಲ್ಲವೇ?''

''ಈಗ ಹಾಗಾಗಿದೆಯೇ?''

''ಏನೋ, ಎಲ್ಲ ವಿಚಿತ್ರ!''

''ನೀವು ಅಧೈರ್ಯರಾಗಬೇಡಿ. ಏನೂ ಯೋಚಿಸಬೇಕಾಗಿಲ್ಲ. ಅರ್ಧ ಹುಚ್ಚು ಬಿಟ್ಟಿದೆ. ಮೂರು-ನಾಲ್ಕು ದಿವಸ ಮೌನದಲ್ಲಿರಿಸಿ ಚಿಕಿತ್ಸೆ ನಡೆಯಿಸಿದರೆ, ಮುಂದೆ ತಮಗೇ

ಗೊತ್ತಾಗುತ್ತದೆ."

"ಓಹೋ! ಹೊತ್ತು ಬಹಳವಾಯಿತು. ನಡೆ ಹೋಗೋಣ."

ಅವರು ಹಾಗೆಯೇ ಎದ್ದು, ವೃಕ್ಷಗಳ ಮರೆಯಲ್ಲಿ ಅದೃಶ್ಯರಾದರು.

---

[೧೫]




ಧರನೂ, ಹೆಂಡತಿ-ಮಕ್ಕಳೂ ಒಂದು ಕಡೆ ಮನೆಯಲ್ಲಿ ಕುಳಿತಿದ್ದರು. ಯಾರ ಮುಖಗಳಲ್ಲಿಯೂ ಕಳೆಯಿಲ್ಲ. ಉದಾಸೀನ ಭಾವವು ಒಡೆದು ಕಾಣುತ್ತಿತ್ತು. ಎಲ್ಲರೂ ಮಂತ್ರಮುಗ್ಧರಂತೆ ಮಾತಿಲ್ಲದೆ ಕುಳಿತಿದ್ದರು. ಕೊಂಚ ಹೊತ್ತಾದ ಬಳಿಕ ಶ್ರೀಧರನು ಸಂತಾಪಸೂಚಕ ಸ್ವರದಿಂದ:—

"ಹತ್ತು ದಿವಸಗಳು ತಳ್ಳಿದ್ದಾಯಿತು. ಇನ್ನು ಐದೇ ದಿನಗಳು."

ಚಂಚಲೆ:—"ನನಗಂತೂ ಮನಸ್ಸಿನಲ್ಲಿ ಕುದಿಯುತ್ತಿದೆ."

ಶ್ರೀಧ:—"ಇನ್ನೈದು ದಿವಸ ಸುಧಾರಿಸು."

ಚಂಚ:—"ಕೊರಡಿಗೆ ಬಿಟ್ಟು ಬಂದಂದಿನಿಂದ ಒಂದು ದಿನವಾದರೂ ನೋಡಿಬರಲಿಲ್ಲ. ಹುಡುಗಿಯನ್ನು ಸಮೀಪಿಸಿ ನೋಡದಿದ್ದರೂ, ದೂರದಿಂದ ನೋಡಬಹುದಲ್ಲ?"

ಶ್ರೀಧ:—"ಯಾವುದಕ್ಕೂ ಮಹಾತ್ಮರು ಅವಕಾಶವನ್ನೇ ಕೊಟ್ಟಿರುವದಿಲ್ಲ."

ಮಾಧ:—“ಚನ್ನಾಗಿದೆ. ನೋಡಕೂಡದು. ವಿಚಾರಿಸ ಕೂಡದು. ಅವರ ಸಂಗಡ ಸಹ ಮಾತನಾಡಕೂಡದು. ಅವರು ಬರುವುದೂ, ಹೋಗುವುದೂ ಸಹ ಕಾದು ನೋಡಕೂಡದು. ಇದರ ಅರ್ಥವೇನು?”

ಶ್ರೀಧ:—“ಮಾಧೂ, ಮಹಾತ್ಮರ ಸಂದೇಶವೇ ಆ ರೀತಿ ಯಾಗಿದೆ. ಅವರು ಸಾಮಾನ್ಯರಲ್ಲ.”

ಮಾಧ:—“ಈಗಿನ ಕಾಲದಲ್ಲಿ ಯಾರನ್ನೂ ನಂಬಲಾಗು ವುದಿಲ್ಲ.”

ಚಂಚ:—“ನನಗೂ ಸ್ವಲ್ಪ ಸಂಶಯವೇ ಎನಿಸುತ್ತದೆ.”

ಶ್ರೀಧರ:—“ಏನು? ಮಹಾತ್ಮರ ವಿಷಯದಲ್ಲೇ?”

ಚಂಚ:—“ಆಗ ನಾನು ಯೋಚನೆಯ ಭರದಲ್ಲಿದ್ದೆನಾದ ಕಾರಣ, ಸರಿಯಾಗಿ ತರ್ಕಿಸಲವಕಾಶವಾಗಲಿಲ್ಲ. ಅವರ ಕಟ್ಟ ಪ್ಪಣೆಯು ಯುಕ್ತಿ-ಯುಕ್ತವಾಗಿದೆಯೆಂದು ಕಾಣುತ್ತದೆ.”

ಶ್ರೀಧ:—“ಅನುಮಾನವೇ ಪ್ರಾಣಸಂಕಟ.”

ಚಂಚ:—“ಒಂದು ವೇಳೆ ಮೋಸವೇ ನಡೆದರೆ?”

ಮಾಧ:—“ಸರ್ವ ನಾಶವೇ!”

ಶ್ರೀಧ:—“ಹಾಗೆಂದಿಗೂ ಆಗದು.”

ಚಂಚ:—“ಆಗಲಿ ಎಂಬ ಕೋರಿಕೆಯು ಯಾರಿಗೂ ಬೇಡ. ಕೆಟ್ಟುದನ್ನು ಯೋಚಿಸಿ, ಒಳ್ಳೆಯದನ್ನು ಊಹಿಸ ಬೇಕೆಂದು ಹಿರಿಯರು ಹೇಳುತ್ತಾರೆ.’”

ಮಾಧವ:—“ಈ ಅನುಮಾನವೇತಕ್ಕೆ? ಹೋಗಿ, ನೋ-ಡೋಣ ನಡೆಯಿರಿ.”

ಚಂಚಲೆ:—“ಏನು ಹೇಳುತ್ತೀರಿ?”

ಶ್ರೀಧರ:—'ನಮ್ಮೆಲ್ಲಾರಿಗೂ ಬುದ್ಧಿಯಿಲ್ಲ.'

ಮಾಧವ:—'ಅದನ್ನೆಷ್ಟು ಹೇಳಿದರೂ ಸಾಕಾಗುವುದಿಲ್ಲ.'

ಚಂಚಲೆ:—"ನೀವು ಸುಮ್ಮನಿರುವುದಿಲ್ಲವಲ್ಲ?"

ಮಾಧ:—"ನಡೆಯುಮ್ಮಾ, ಬೇಕಾದದ್ದಾಗಲಿ. ಆ ಸಂನ್ಯಾಸಿಯು ಬಿಡಿಸದಿದ್ದರೂ ಚಿಂತೆಯಿಲ್ಲ, ಈತನಿಗಿಂತಲೂ ಮಿಗಿಲಾದ ವೈದ್ಯರು ಪ್ರಪಂಚದಲ್ಲಿ ಇಲ್ಲೇ ಇಲ್ಲವೋ?"

ಚಂಚ:—"ಹೌದು. ಮಗು, ನಡೆಯಿರಿ ಹೋಗೋಣ."

ಶ್ರೀಧ:—"ಹೋಗೋಣವೆ?"

ಚಂಚ:—"ಅನುಮಾನವೇ ಇಲ್ಲ. ಒಂದು ವೇಳೆ ಸಂನ್ಯಾಸಿಯು ಸಾಧುವಾದರೆ, ಕೋಪಿಸಿಕೊಳ್ಳುವುದಿಲ್ಲ; ಕೋಪಿಸಿಕೊಂಡವನು ನಿಜವಾದ ಸಂನ್ಯಾಸಿಯೇ ಅಲ್ಲ. ಸುಮ್ಮನೆ ದೂರದಲ್ಲಿ ನಿಂತು ನೋಡಿ ಸಮಾಧಾನಪಟ್ಟು ಬರೋಣ.

ಶ್ರೀಧ:—'ಎಲ್ಲರೂ ಹೋಗೋಣವೇ?'

ಚಂಚ:—"ಏನೋ ಮಾಧು, ನೀನು ಸ್ವಲ್ಪ ಒರಟು. ಆ ಸಂನ್ಯಾಸಿಗಳ ಮುಂದೆ ಹುಚ್ಚಾಪಟ್ಟೆ ಮಾತನಾಡೀಯೆ. ಏಕೆಂದರೆ, ಅರಿಯದೆ ಒಬ್ಬರನ್ನು ಆಡಿಕೊಳ್ಳಬಾರದು. ಬರಿಯ ಅನುಮಾನದಿಂದ ಯೋಗ್ಯಾಯೋಗ್ಯ ವಿಚಾರಗಳನ್ನು ನಿರ್ಧರಿಸುವುದಕ್ಕಾಗುವುದಿಲ್ಲ."

ಮಾಧ:—"ನನಗೆಲ್ಲಾ ಗೊತ್ತು. ನಡೆಯಿರಿ."

ಎಲ್ಲರೂ ಎದ್ದರು. ತಲೆಬಾಗಿಲಿಗೆ ಬೀಗವನ್ನು ಹಾಕಿಕೊಂಡು ಹೊರಟು ನಡೆದರು. ಸ್ವಲ್ಪಹೊತ್ತಿನಲ್ಲಿಯೇ ಆ ಕೊಠಡಿಯನ್ನು ಸಮೀಪಿಸಿದರು. ಬಾಗಿಲು ತೆರೆದಿದ್ದಿತು. ಸಂನ್ಯಾಸಿಯು ಬಂದಿರಬಹುದೆಂದು ಊಹಿಸಿಕೊಂಡರು. ಅಂಜುತ್ತಂಜುತ್ತ

ಒಂದೊಂದೇ ಹೆಜ್ಜೆಯಿಡುತ್ತಾ ಮುಂದೆ ನಡೆಯುತ್ತಿದ್ದರು. ಒಳಗಡೆ ಏನೂ ಸದ್ದಾಗುತ್ತಿದ್ದಂತೆ ತೋರಿಬರಲಿಲ್ಲ. ಮತ್ತಿಷ್ಟು ಮುಂದುವರೆದರು. ಏನೂ ಕಾಣಿಸಲಿಲ್ಲ. ಆಗ ಮಾಧವನು: "ಇಲ್ಲಿಗೇ ಬಂದೆನಂತೆ. ಇನ್ನು ಸ್ವಲ್ಪದರಲ್ಲೇನು?" ಎನ್ನುತ್ತಾ ತಾನು ಮುಂದೆ ಮುಂದೆ ನಡೆದನು. ಚಂಚಲೆಯು: "ಮಾಧೂ ಮಾಧೂ" ಎಂದು ಕಿರು ಧ್ವನಿಯಲ್ಲಿ ಕೂಗಿದಳು. ಅದನ್ನವನು ಲಕ್ಷ್ಯಮಾಡಲಿಲ್ಲ. ಮುಂದೆ ಹೋದ ಮಾಧವನಿಗೆ ಮನೆಯಲ್ಲಾರೂ ಇದ್ದಂತೆ ಕಂಡು ಬರಲಿಲ್ಲ. ಅವನಿಗೆ ಮತ್ತಷ್ಟು ನೋಡಬೇಕೆಂಬ ಆಕಾಂಕ್ಷೆಯಾಯಿತು. ಬಾಗಿಲನ್ನು ಸಮೀಪಿಸಿದನು. ನೋಡಿದನು. ಒಳಗಾರೂ ಇರಲಿಲ್ಲ! ಗಾಬರಿಯಿಂದ ಹಿಂದಿರುಗಿ ನೋಡಿದನು. ತಂದೆ-ತಾಯಿಗಳಾಗಲೇ ಅಲ್ಲಿಗೆ ಬಂದಿದ್ದರು. ಮಗನ ಗಾಬರಿಯ ಕಾರಣವು ಅವರಿಗೆ ತತ್ ಕ್ಷಣವೇ ಗೊತ್ತಾಯಿತು. ಮಳೆ ಬಂದು ನಿಂತಂತೆ, ಆ ಮೂವರೂ ನಿಂತುಬಿಟ್ಟರು! ಅನಂತರ ಚಂಚಲೆಯು:—"ದಗಾಕೋರ, ಏಂತಹ ತಂತ್ರವನ್ನು ಮಾಡಿದ? ಯಾರನ್ನು ನಂಬಬೇಕು? ಯಾರನ್ನು ಬಿಡಬೇಕು? ಏನು ಹೀಗೆ ನಿಂತಿರಿ?" ಎಂದಳು ಗಂಡನನ್ನು ಗದರಿಸುತ್ತ. "ಏನು ಮಾಡಬೇಕೇ?" ಎಂದನು ಕಾತರದಿಂದ ಶ್ರೀಧರನು. "ಪೋಲೀಸು ಠಾಣೆಗೆ ಹೋಗಿ ಒಂದು ಫಿರ್ಯಾದು ಅರ್ಜಿಯನ್ನಾದರೂ ಕೊಡಿರಿ. ಅದನ್ನೂ ಹೇಳಿ ಕೊಡಬೇಕೇ?" ಎಂದಳಾಕೆಯು ಘರ್ಜಿಸುವ ಧ್ವನಿಯಲ್ಲಿ. ಶ್ರೀಧರನದಕ್ಕೆ: "ನಡೆಯಿರಿ, ಮೊದಲು ಮನೆಗೆ ಹೋಗಿ ಮಾತನಾಡೋಣ" ಎಂದನು. "ಮೊದಲು ಠಾಣೆಗೆ ಹೋಗಿರೆಂದರೆ, ಮನೆಗೆ ಎನ್ನುವಿರಲ್ಲಾ!" ಎಂದಳು ಮತ್ತೆ. "ಅಂಗಿ, ರುಮಾಲು ಬೇಡವೇನು?"

ಎಂದನು ನಡುಗುವ ಕಂಠದಲ್ಲಿ. 'ಊ, ಅದೊಂದು. ನಡೆಯಿರಿ! ನಡೆಯಿರಿ!' ಎಂದು ಬಿರಬಿರನೆ ಹೆಜ್ಜೆ ಹಾಕಲಾರಂಭಿಸಿದಳು. ಕೈ ಹಿಡಿದು ನಡೆದು ಬರುತ್ತಿದ್ದ ಎಳೆ ಮಗಳೂ ಸಹ ಜ್ಞಾಪಕಕ್ಕೆ ಬರದೆ, ಆ ರೋಷಾವೇಷದಲ್ಲಿ ಹಾಗೆಯೇ ಎಳೆದುಕೊಂಡು ಹೋಗುತ್ತಿದ್ದಳು. ಆ ಹುಡುಗಿಯು: "ಅಮ್ಮಾ, ಅಮ್ಮಾ" ಎಂದು ರೋದಿಸಿತು. ಚಂಚಲೆಯು:—"ಈ ನಿರ್ಭಾಗ್ಯಳು ಬೇರೆ ಸಾಲುದುದಕ್ಕೆ." ಎಂದು ಹೇಳುತ್ತಾ "ಘಡೀ, ಘಡೀ" ಎಂದು ತಾಡನ ಮಾಡಿ ಕಂಕುಳಿಗೆ ಹಾಕಿಕೊಂಡು ನಡೆದಳು. ಹಾಗೂ ಹೀಗೂ ಮನೆಯ ಬಾಗಿಲಿಗೆ ಬಂದು ಬಿದ್ದರು.

ಇಬ್ಬರು ಪೋಲೀಸಿನವರು ಮನೆಯ ಮುಂದೆ ನಿಂತಿದ್ದರು. ಶ್ರೀಧರನು ಅವರನ್ನು ಕಂಡು, "ಏನಿರಯ್ಯ, ಯಾರಿದ್ದಾರೆ ಠಾಣೆಯಲ್ಲಿ? ಸ್ವಲ್ಪ ಕೆಲಸವಿದೆ." ಎಂದು ಕೇಳಿದನು. "ಬನ್ನೀ ಸ್ವಾಮಿ, ನಾವೂ ತಮ್ಮನ್ನೇ ಕಾಯುತ್ತಿದ್ದೆವು" ಎಂದು ಪೋಲೀಸಿನವರು ಹೇಳುತ್ತಿದ್ದಂತೆಯೇ ಶ್ರೀಧರನು: "ಏನು, ನನ್ನನ್ನೇ? ನೀವೇ? ಕಾಯುತ್ತಿದ್ದಿರಾ?" ಎಂದನು. ಅದಕ್ಕೆ ಪೋಲೀಸಿನವರು: "ತಮಗಾರು ಬೇಕಾಗಿತ್ತು ಸ್ವಾಮಿ?" ಎಂದರು. ಶ್ರೀಧರನು: 'ಇನ್ಸ್ಪೆಕ್ಟರು' ಎಂದು ಹೇಳಿದನು. "ಸರಿ. ಅವರೇ ತಮಗಾಗಿ ಕಾದಿದ್ದಾರೆ." ಎಂದು ಭಟರು ಉತ್ತರ ಕೊಟ್ಟರು. ಶ್ರೀಧರನು "ಬೇಗ ಬಾಗಿಲು ತೆರೆದು, ಆ ಅಂಗಿ, ಆ ಸಿಂಬೆ ಇಲ್ಲಿ ಕೊಡೇ. ಜಾಗ್ರತೆ ಹೋಗಿ, ತಕ್ಕದ್ದು ಮಾಡಿಸಿ ಬರುತ್ತೇನೆ." ಎಂದು ಹೆಂಡತಿಗೆ ಹೇಳಿದನು. ಪೋಲೀಸಿನವರಾಕೆಯನ್ನು ತಡೆದರು. 'ಏತಕ್ಕಯ್ಯಾ?' ಎಂದು ಶ್ರೀಧರನು ಕೇಳಲು, "ತಮ್ಮನ್ನು ಹೇಗಿದ್ದರೆ ಹಾಗೆ, ಕರೆ....ಅಲ್ಲ ಹಿಡಿತರುವಂತೆ ಅಪ್ಪಣೆಯಾಗಿದೆ" ಎಂದರು.

'ನನ್ನನ್ನೇ' ಎಂದನು ಶ್ರೀಧರನು ಭಯಾಶ್ಚರ್ಯಗಳಿಂದ. 'ಅಲ್ಲ, ನಿಮ್ಮೆಲ್ಲರನ್ನೂ' ಎಂದರು ಭಟರು ಉತ್ತರವಾಗಿ. 'ಏನಿರಯ್ಯಾ, ನನ್ನ ಮುಂದೆಯೇ ತಮಾಷೆ ಮಾಡುವಿರಾ?' ಎಂದನು ಶ್ರೀಧರನು ಸ್ವಲ್ಪಸಿಟ್ಟಿಯಾಗಿ. ಪೋಲೀಸಿನವರು ಕಿಸೆಯಿಂದೊಂದು ಕಾಗದ ವನ್ನು ತೆಗೆದು ಶ್ರೀಧರನಿಗೆ ತೋರಿಸಿದರು. ಅದನ್ನು ನೋಡಿ ಅವನಿಗೆ ಪ್ರಪಂಚವೇ ತನ್ನ ನೆತ್ತಿಯ ಮೇಲೆ ಬಿದ್ದಂತಾಯಿತು! ತಮ್ಮೆಲ್ಲರನ್ನೂ ದಸ್ತಗಿರಿ ಮಾಡಿರುವುದಾಗಿ ಆ ಕಾಗದವು ಹೇಳು ತ್ತಿದ್ದಿತು. ಸ್ವಲ್ಪ ಕಾಲದೊಳಗಾಗಿ ಶ್ರೀಧರನು ಸಂಸಾರ ಸಮೇತನಾಗಿ ಪೋಲೀಸ್ ಠಾಣೆಯಲ್ಲಿ ಬಂಧಿತನಾದನು.

—

## [೧೬]



ಹನ್ನೊಂದು ಗಂಟೆಗಳಿಗಾಗಲೇ ಬಿಸಿಲಿನ ಝಳವು ಸಹಿಸಲಸದಳವಾಗಿದ್ದಿತು. ವೃಕ್ಷಾಗ್ರಗಳಲ್ಲಡಗಿದ್ದ ಪಕ್ಷಿಸಂಕುಲವು ಬೇಸಿಗೆಯ ತಾಪವನ್ನು ತಾಳಲಾರದೆ 'ಕೀಚು, ಕೀಚು,' ಧ್ವನಿಗೈಯುತ್ತಿದ್ದಿತು. ತಂಟೆ, ತಾಪತ್ರಯಗಳಿಲ್ಲದ ಹಲವರು ಮನೆಗಳಲ್ಲಿಯೂ, ತಂಪಾದ ನೆಳಲಿನಲ್ಲಿಯೂ ಉಷ್ಣಾಧಿಕ್ಯವನ್ನು ಕಡಿಮೆ ಮಾಡಿಕೊಳ್ಳುತ್ತಿದ್ದರು. ವೃತ್ತಿಪರಾಯಣರಾದ ವರ್ತಕರೂ, ಸರ್ಕಾರದ ನೌಕರರೂ ಯತ್ನವಿಲ್ಲದೆ ಕಾರ್ಯೈಕ ತತ್ಪರರಾಗಿದ್ದರು. ಅಧಿಕಾರ ವರ್ಗದವರು ಪಾದ-ರಕ್ಷೆಗಳ ನ್ನು ತೊಟ್ಟು, ಹಗುರವಾದ ಉಡುಪುಗಳನ್ನು ಧರಿಸಿ, ಕೊಡೆ ಗಳನ್ನು ಹಿಡಿದು, ಜಾಗ್ರತೆ-ಜಾಗ್ರತೆಯಾಗಿ ಕಚೇರಿಗಳ ಕಡೆಗೆ

ನಡೆಯುತ್ತಿದ್ದರು. ಮಾರ್ತಾಂಡನು ತೀಕ್ಷ್ಣವಾದ ಕಿರಣಗಳಿಂದ ವಿಶ್ವವನ್ನೇ ದಹಿಸುವಂತಿದ್ದನು.

ನ್ಯಾಯಾಸ್ಥಾನ ಮಂದಿರದಲ್ಲಿ ಪದವೀಧರರೂ, ಪೋಲೀಸ ಅಧಿಕಾರಿಗಳೂ, ಗುಪ್ತಪೋಲೀಸರೂ, ಗುಮಾಸ್ತರೂ ಮಾತನಾಡುತ್ತಾ ಉಚಿತಾಸನಗಳಲ್ಲಿ ಕುಳಿತಿದ್ದರು.

ಅವರುಗಳ ಮುಂಭಾಗದಲ್ಲಿ ಅರ್ಧ ಚಂದ್ರಾಕಾರವಾದ ಒಂದು ವೇದಿಕೆಯೂ, ಅದರ ಮೇಲೆ ಕಾಗದ-ಪತ್ರಗಳೂ, ಲೇಖನದ ಇತರ ಸಾಮುಗ್ರಿಗಳೂ ಇದ್ದುವು. ಆ ವೇದಿಕೆಯ ಹಿಂಭಾಗಕ್ಕೊಂದು ಚೌಕಾದ ಎತ್ತರವಾದ ವೇದಿಕೆಯಿದ್ದಿತು. ಒಂದು ವಿಧವಾದ ಹಸರು ಬಣ್ಣದ ಬಟ್ಟೆಯಿಂದ ಅದರ ಮೇಲ್ಭಾಗವು ಮುಚ್ಚಲ್ಪಟ್ಟದ್ದಿತು. ಅದರ ಮೇಲೆ ಎಡ-ಬಲ ಭಾಗಗಳಲ್ಲಿ ದೊಡ್ಡ ದೊಡ್ಡ ಧರ್ಮಶಾಸ್ತ್ರ ಗ್ರಂಥಗಳು ಜೋಡಿಸಲ್ಪಟ್ಟಿದ್ದವು. ಮಧ್ಯ ಭಾಗದಲ್ಲಿ ಲೆಕ್ಕಣಿಕೆಯ ಉಪಕರಣಗಳೂ ಕಾಗದಗಳೂ ಅಚ್ಚುಕಟ್ಟಾಗಿ ಜೋಡಿಸಲ್ಪಟ್ಟಿದ್ದುವು. ಆ ವೇದಿಕೆಯ ಹಿಂಭಾಗದಲ್ಲಿ ಒಂದು ಭದ್ರಾಸನವಿದ್ದಿತು. ಮರಗೆಲಸದ ಚಮತ್ಕೃತಿಯಿಂದ ಸುಂದರವಾಗಿ ನಿರ್ಮಿತವಾಗಿದ್ದ ಆ ಆಸನದ ಒಳಭಾಗದ ಕೊಂಚ ಪ್ರದೇಶವು ಮೃದುವಾದ ಮೆತ್ತೆಯಿಂದ ಕೂಡಿದ್ದಿತು. ಅದಕ್ಕೆ ಸರಿಯಾಗಿ ಮೇಲ್ಭಾಗದಲ್ಲಿ ಪಂಕವೊಂದು ನೇತಾಡುತ್ತಿದ್ದಿತು. ನ್ಯಾಯಾಧೀಶರರಿನ್ನೂ ಬಂದಿರಲಿಲ್ಲ. ಹೊರಭಾಗದ ಅಂಗಳದಲ್ಲಿ ಕಕ್ಷಿಗಾರರೂ, ಇತರ ಜನರೂ ಮಾತನಾಡುತ್ತಾ ಕುಳಿತಿದ್ದರು. ಅಂದು ನಡೆಸಲ್ಪಡುವ ಮೊಕದ್ದಮೆಯ ವಿಚಾರಣೆಯನ್ನು ನೋಡುವದರ ಸಲುವಾಗಿ ಅನೇಕ ಜನರು ನೆರೆದಿದ್ದರು. ಅಂತೂ ಇಂದು ನ್ಯಾಯಾಸ್ಥಾ

ನವು ಜನ ಪರಿಪೂರ್ಣವಾಗಿದ್ದಿತು. ಇದ್ದಕ್ಕಿದ್ದಂತೆಯೇ ಎಲ್ಲಿಯ ಮಾತು-ಕಥೆಗಳು ಅಲ್ಲಿಯೇ ನಿಂತುಹೋದವು. ಜನರೆಲ್ಲರೂ ದಿಗ್ಗನೆದ್ದರು. ಸ್ವಲ್ಪ ದೂರದಲ್ಲಿ ನ್ಯಾಯಾಧಿಪರು ಗಂಭೀರ ವಾದ ನಡಿಗೆಯಿಂದ ಬರುತ್ತಿದ್ದರು. ಸೇವಕನೊಬ್ಬನು ಕೆಲವು ಪುಸ್ತಕಗಳನ್ನು ಹೊತ್ತು, ಸಮೂಹದಿಂದಿದ್ದ ಜನರಿಗೆ ಸರಿಯಾ ಗಿ ದಾರಿ ಬಿಡುವಂತೆ ಸನ್ನೆ ಮಾಡುತ್ತಾ ಮುಂದು-ಮುಂದಾಗಿ ಬಂದು, ತಾನು ಕೊತ್ತಿದ್ದ ಹೊರೆಯನ್ನು ನ್ಯಾಯಾಧಿಪರ ವೇದಿಕೆಯ ಮೇಲಿಟ್ಟು, ದ್ವಾರದಲ್ಲಿ ನಿಂತನು. ಆ ಹೊತ್ತಿಗೆ ನ್ಯಾಯ ಮೂರ್ತಿಗಳು ಬಂದು, ನಿರ್ದಿಷ್ಟವಾಗಿದ್ದ ಭದ್ರಾಸನದಲ್ಲಿ ಮಂಡಿಸಿದರು.

ಸಭೆಯು ಮೌನವಾಗಿದ್ದಿತು. ಅಷ್ಟು ಜನರಿದ್ದರೂ ಯಾರ ಬಾಯಿಂದಲೂ ಮಾತು ಹೊರಡುತ್ತಿರಲಿಲ್ಲ. ಅಲ್ಲಿ ಗಾಂಭೀ ರ್ಯವು ಮೂರ್ತಿಮತ್ತಾಗಿದ್ದಿತು. ಎಲ್ಲರ ದೃಷ್ಟಿಯೂ ನ್ಯಾಯಾ ಧಿಪರ ಕಡೆಗೇ ಇದ್ದಿತು. ನ್ಯಾಯಾಧಿಪರು ಆಸನಾಸೀನರಾದ ತರುವಾಯ, ವೇದಿಕೆಯ ಮೇಲಿರಿಸಲ್ಪಟ್ಟಿದ್ದ ಕೆಲವು ಕಾಗದ ಗಳನ್ನು ನೋಡುತ್ತಾ ಮೌನಮುದ್ರಿತರಾಗಿದ್ದರು. ಅನಂತರ ಅಧಿಕಾರಸೂಚಕ ಸ್ವರದಿಂದ ಅವರು "ರಾಧಾಕಾಂತ, ಎಲ್ಲವೂ ಬದ್ಧವಾಗಿದೆಯಷ್ಟೆ?" ಎಂದು ಆಸನಾಸೀನನಾಗಿದ್ದ ಓರ್ವ ತೇಜಸ್ವಿಯೂ, ಭವ್ಯಾಕಾರನೂ ಆದ ಪುರುಷನನ್ನು ನಿರ್ದೇಶಿಸಿ ಕೇಳಿದರು.

ರಾಧಾಕಾಂತ:—'ಅಪ್ಪಣೆ.'

ನ್ಯಾಯಾ:—'ಹಾಗಾದರೆ ಅಪರಾಧಿಗಳು ಕರೆತರಲ್ಪಡಲಿ.'

ಒಡನೆಯೇ ನ್ಯಾಯಮೂರ್ತಿಗಳ ಮುಂಗಡೆಯಲ್ಲಿ ಭಟ

ವ್ಯೂಹದಿಂದ ಶ್ರೀಧರ, ಚಂಚಲೆ, ಮಾಧವರು ಬಂದು ನಿಂತರು-ಅವರು ಕೇವಲ ಮೊದಲಿನವರಂತೆ ಇರಲಿಲ್ಲ. ಒಂದೆರಡು ದಿವಸಗಳ ಸರ್ಕಾರದ ಬಂಧನೆಯು ಅವರ ಆಕಾರಗಳನ್ನೇ ಮಾರ್ಪಡಿಸಿದ್ದಿತು. ಏನು ಸಾಮರ್ಥ್ಯವಿದೆಯೋ ಅದರಲ್ಲಿ!

ಗುಮಾಸ್ತರು ಆ ಮೂವರ ಹೆಸರು-ವಿಳಾಸಗಳನ್ನು ಕೇಳಿ ಬರೆದುಕೊಂಡರು. ಅನಂತರ ನ್ಯಾಯಮೂರ್ತಿಗಳು ಒಂದು ಕಾಗದವನ್ನು ಹಿಡಿದೆತ್ತಿ ಓದತೊಡಗಿದರು.

ಪತ್ತೇದಾರರಾದ ರಾಧಾಕಾಂತರು ಇಪ್ಪತ್ತನೆಯ ತಾರೀಖಿನ ದಿವಸ ಕೊಟ್ಟಿರುವ ಫಿರ್ಯಾದಿಯ ಅಂಶ:

ಭವಾನೀಪುರದ ಒಂದನೇ ದರ್ಜೆಯ ನ್ಯಾಯಾಧಿಪರ ಕಚೇರಿಗೆ—

ಇದೇ ತಿಂಗಳು ಹತ್ತೊಂಬತ್ತನೆಯ ತಾರೀಖಿನ ದಿವಸ ನಡೆಯತೊಡಗಿದ್ದ ಶ್ರೀಧರಶರ್ಮರ ಮಗನ ಮದುವೆಗೆ ಹೋಗಿದ್ದೆನು. ಅನೇಕ ಜನ ಅಧಿಕಾರವರ್ಗದವರೂ, ಕಛೇರಿಯವರೂ ಆಗಮಿಸಿದ್ದರು. ಅಂದು ಲಗ್ನ ವಧುವು ಅಕಸ್ಮಾತ್ ಜ್ಞಾನ ತಪ್ಪಿ, ಬಿದ್ದುಹೋದಳು. ಪರಿಶೀಲನಾ ದೃಷ್ಟಿಯಿಂದ ನಾನಾಕೆಯನ್ನು ನೋಡಿದೆನು. ಕೇವಲ ಅನುಮಾನವಾಯಿತು. ಆಕೆಯು ಬಹಳ ಹೆದರಿಕೆಯಿಂದ ಆ ಲಗ್ನಕ್ಕೊಪ್ಪಿದ್ದಂತೆಯೂ, ಆ ಮನೆಯವರ ಆವುದೋ ನಿರ್ಬಂಧದಿಂದ ಇರುವಳೆಂದೂ ಊಹಿಸಿದೆನು. ಲಗ್ನಮಂಟಪದೊಳಕ್ಕೆ ವಧುವು ಯಾವ ರೀತಿ ಬಂದಳೆಂಬುದನ್ನು ಅನೇಕ ಜನರು ನೋಡಿರುತ್ತಾರೆ.

ಆಕೆಯು ಮುಂಭಾಗದಲ್ಲಿ ಕುಳಿತಿದ್ದ ಅಧಿಕಾರ ವರ್ಗದವರನ್ನು ನೋಡಿದೊಡನೆಯೇ ಅಶ್ರುಧಾರೆಯಾಗಿ ಕೆಳಕ್ಕುರುಳಿದಳು.

ಆದರಿಂದ ನೆರೆದಿದ್ದ ಸಭೆಯಲ್ಲಿ ತನ್ನ ಸಂಬಂಧಿಕರಾರೋ ಇರುವರೆಂಬುದಾಗಿಯೂ, ಅವರನ್ನು ಕಂಡೊಡನೆಯೇ ಹಾಗಾಗಿರಬೇಕೆಂದೂ ನಿರ್ಧರಿಸಿದೆನು.

ಹಾಗೆ ಆಕೆಗೆ ಕಾಣಿಸಿಕೊಂಡವರು ಪ್ರಿಯವಾದವರಲ್ಲದೆ, ಶತ್ರುಗಳಲ್ಲವೆಂಬುದಾಗಿಯೂ ಯೋಚಿಸಿದೆನು. ಏಕೆಂದರೆ, ಶತ್ರುಗಳಾಗಿದ್ದ ಪಕ್ಷದಲ್ಲಿ ಅದೇ ರೀತಿ ದುಃಖವೋ ಇಲ್ಲವೇ ಅದಕ್ಕಿಂತಲೂ ಅಧಿಕವಾಗಿಯೋ ಉಂಟಾಗಬೇಕಾಗಿದ್ದಿತು. ಅದಕ್ಕೆ ವಿರೋಧವಾದ ದುಃಖವನ್ನು ತೋರ್ಪಡಿಸಿ "ನನ್ನನ್ನುದ್ಧಾರ ಮಾಡಿರೆ"ಂಬ ಸಂತಾಪಸೂಚಕಗಳಾದ ಕಣ್ಣೀರು ಸುರಿಸಿ, ಕೊಂಚ ಆನಂದಮಿಶ್ರವಾದ ಅಪಾರ ದುಃಖಗಳುಂಟಾದುದರಿಂದ, ಜ್ಞಾನಪಲ್ಲಟವಾಗಿ ಕೆಳಗೆ ಬಿದ್ದಿರಬೇಕೆಂದು ತರ್ಕಿಸಿದೆನು. ಅನೇಕ ಜನರಿಗೆ ಹೀಗಾಗುವುದನ್ನು ನನ್ನ ಕೆಲಸವು ನನಗೆ ಚೆನ್ನಾಗಿ ಅನುಭವ ಮಾಡಿ ಕೊಟ್ಟಿದೆ. ಅದಕ್ಕಾಗಿ ಅದನ್ನು ಪರಿಶೀಲಿಸುವುದರ ಬಗ್ಗೆ ಕಚೇರಿಯವರು ಅನುಮತಿಯನ್ನು ಕೊಡಬೇಕಾಗಿ ಪ್ರಾರ್ಥಿಸುತ್ತೇನೆ.

ಪತ್ತೇದಾರ ರಾಧಾಕಾಂತ.

ಅದಕ್ಕೆ ಕಛೇರಿಯವರ ಅಪ್ಪಣೆ:—

ನಿಮ್ಮ ಅರ್ಜಿಯನ್ನು ಪರಾಂಬರಿಸಲಾಯಿತು. ನಿಮ್ಮ ಕೋರಿಕೆಯಂತೆ ಪತ್ತೆತರದೂದು ನಡೆಸಲು ಅಧಿಕಾರ ಕೊಟ್ಟಿರುತ್ತದೆ.

ಆದಾದ ಮೇಲೆ ಪುನಃ ರಾಧಾಕಾಂತರಿಂದ ಬಂದ ಪತ್ರ:-

ಇಪ್ಪತ್ತನೇ ತಾರೀಖಿನ ದಿವಸವೇ ನಾನು ವೇಷಾಂತರದಿಂದ ಶ್ರೀಧರಶರ್ಮರ ಮನೆಗೆ ಹೋಗಿ ಕುಮುದಾದೇವಿ

ಯೆಂಬ ಲಗ್ನವಾಗಲಿದ್ದಾಕೆಯನ್ನು ಉಪಾಯಾಂತರದಿಂದ ತಂದಿದ್ದೇನೆ. ಆಕೆಯನ್ನು ಶಾಂತಿಗೊಳಿಸಿ ಸಮಾಧಾನಸ್ಥಿತಿಗೆ ತರಬೇಕಾದರೆ, ಹದಿನೈದಿಪ್ಪತ್ತು ದಿವಸಗಳಾಗುತ್ತವೆ. ಆ ವರಿವಿಗೂ ಆಕೆಯನ್ನು ನನ್ನ ಉಸ್ತುವಾರಿಯಲ್ಲಿಟ್ಟುಕೊಂಡು ಚಿಕಿತ್ಸೆ ನಡೆಸಲು ಅಪ್ಪಣೆಯಾಗಬೇಕು.

ಅದಕ್ಕೆ ಕಛೇರಿಯವರ ಉತ್ತರ:—

ಕಛೇರಿಯವರ ಅಧಿಕಾರಕ್ಕೊಳಪಟ್ಟ ಕಟ್ಟಡ ಒಂದರಲ್ಲಿ, ಕಛೇರಿಯ ಮುಖ್ಯಾಧಿಕಾರಿಗಳ ಪ್ರತ್ಯಕ್ಷದಲ್ಲಿ ನಿಮಗೆ ಚಿಕಿತ್ಸಾದಿಗಳನ್ನು ನಡೆಸಲು ಅಧಿಕಾರ ಕೊಡಲ್ಪಟ್ಟಿದೆ.

ಇದಾದ ಮೇಲೆ ಅವರಿಂದ ಬಂದ ಪತ್ರ:--

ಈಗ ಸದರಿಯಾಕೆಗೆ ಕಾಯಿಲೆ ಗುಣವಾಗಿರುತ್ತದೆ. ಸಮಾಚಾರಗಳೆಲ್ಲವೂ ತಿಳಿದು ಬಂದುವು. ಅವುಗಳನ್ನು ಈ ಕೆಳಗೆ ನಮೂದಿಸಿರುತ್ತೇನೆ:—

ಆಕೆಯದು ಸುಂದರಪುರವಂತೆ. ಸುಂದರಶರ್ಮ-ಮುರಾದೇವಿ ಇವರುಗಳು ಮಾತಾಪಿತೃಗಳಂತೆ. ಬಾಲ್ಯದಲ್ಲಿಯೇ ವಿವಾಹಿ.... ಎಂದು ಅಷ್ಟಕ್ಕೇ ನಿಲ್ಲಿಸಿ, ನ್ಯಾಯಮೂರ್ತಿಗಳು ಮುಖದ ಮೇಲಿನ ಬೆವರು ಹನಿಗಳನ್ನು ಒರಿಸಿಕೊಳ್ಳುವದಕ್ಕೋ ಮತ್ತಾವುದಕ್ಕೋ, ಕೊಂಚ ಹೊತ್ತು ಕರವಸ್ತ್ರದಿಂದ ಮುಖವನ್ನು ಮರೆಮಾಚಿಕೊಂಡರು. ಅನಂತರ ಅವರು ಗುಮಾಸ್ತರ ಕಡೆ ನೋಡಿ ಸಶೇಷವನ್ನು ಓದುವಂತೆ ಆಜ್ಞಾಪಿಸಿ, ತಮ್ಮೆರಡು ಮೊಣಕೈಗಳನ್ನೂ ವೇದಿಕೆಯ ಮೇಲೆ ನಿಲ್ಲಿಸಿ, ಕೈಗಳಿಂದ ತಲೆಯನ್ನು ಹೊತ್ತು, ಅವನಿತ ಮುಖರಾಗಿ ಆಲಿಸುವವರಂತೆ ಇದ್ದರು.

ಗುಮಾಸ್ತರು ಈ ರೀತಿ ಓದತೊಡಗಿದರು:—

ವಿವಾಹಿತಳಾಗಿದ್ದಳಂತೆ. ಮದುವೆಯಾದ ಮೇಲೆ ಗಂಡಂದಿರು ಓದುವುದಕ್ಕೆಂದು ಎಲ್ಲಿಗೋ ಹೋದರಂತೆ. ಆ ತರುವಾಯ ಎರಡು-ಮೂರು ವರ್ಷಗಳೊಳಗಾಗಿಯೇ ತಂದೆ-ತಾಯಿಗಳು ಮಡಿದರಂತೆ. ಮರಣ ಕಾಲದಲ್ಲಿ ತಂದೆಯವರು ಶ್ರೀಧರ ಶರ್ಮರನ್ನು ಕರೆಸಿಕೊಂಡು, ತನ್ನ ಅನಂತರ ಅಳಿಯನನ್ನು ಕರೆಸಿಕೊಂಡು, ಮಗಳನ್ನೂ ಆಸ್ತಿಯನ್ನೂ ಆತನಿಗೊಪ್ಪಿಸಬೇಕೆಂದು ಪ್ರಮಾಣವಚನವನ್ನು ಹೊಂದಿದ್ದರಂತೆ. ಶ್ರೀಧರರು ಸುಂದರ ಶರ್ಮರ ಖಾಸಾ ಭಾವಮೈದುನರಂತೆ.

ಅನಂತರ ಶ್ರೀಧರರು ಕುಮುದಾದೇವಿಯವರನ್ನು ಹೇರಂಭಾಪುರಕ್ಕೆ ಕರೆದುಕೊಂಡು ಹೋದರಂತೆ. ಕಡೆಗೆ ಅವರ ಮಗನಿಗೂ ಆಕೆಗೂ ವಿವಾಹ ಮಾಡಿದರೆ, ಆಸ್ತಿಯು ಯಾವತ್ತೂ ತಮಗೇ ದಕ್ಕುವುದೆಂಬ ದುರಭಿಪ್ರಾಯದಿಂದ ಲಗ್ನವನ್ನು ನಡೆಸಲು ಅಪರಿಚಿತವಾದ ಈ ಗ್ರಾಮಕ್ಕೆ ಬಂದು ಸೇರಿದರಂತೆ. ಈ ಹಂಚಿಕೆಯೆಲ್ಲವೂ ಚಂಚಲಾದೇವಿಯದಂತೆ. ಕುಮುದಾದೇವಿಯು ಲಗ್ನಕೊಪ್ಪದಿರಲು, ಚಂಚಲಾದೇವಿಯು ಒಂದು ದಿನ ಕೊಲ್ಲಲುದ್ಯುಕ್ತಳಾಗಿದ್ದಳಂತೆ. ಮಾಧವನೂ ಕೊಲ್ಲುವುದಾಗಿ ಹೆದರಿಸುತ್ತಿದ್ದನಂತೆ. ಕುಮುದಾದೇವಿಯು ಯತ್ನವಿಲ್ಲದೆ ಸಮಯ ನಿರೀಕ್ಷಣೆಯಲ್ಲಿದ್ದಳಂತೆ. ಲಗ್ನದ ದಿವಸ ಮಂಟಪದ ಮುಂಗಡೆ ಕುಳಿತಿದ್ದವರಲ್ಲಿ ಒಬ್ಬರು ತನ್ನ ಗಂಡಂದಿರಾಗಿದ್ದರಂತೆ. ಅವರನ್ನು ನೋಡುತ್ತಲೇ ಆಕೆಗೆ ಸ್ಮರಣೆ ತಪ್ಪಿತಂತೆ. ಇದು ವಿಷಯದ ಸಾರಾಂಶ.

ಅಲ್ಲದೆ ಮೇಲ್ಕಂಡ ಅಪರಾಧಿಗಳಾದ ಶ್ರೀಧರಶರ್ಮ,

ಚಂಚಲಾದೇವಿ, ಮಾಧವಶರ್ಮ ಇವರುಗಳನ್ನು ಕೂಡಲೆ ದಸ್ತ ಗಿರಿ ಮಾಡಿಸಿ ವಿಚಾರಣೆ ನಡೆಸುವುದರ ಮೂಲಕ ಅಪರಾಧಿಗಳಿಗೆ ತಕ್ಕ ದಂಡನೆ ವಿಧಿಸುವಿರಾಗಿ ನಂಬಿದ್ದೇನೆ; ಮತ್ತು ಕುಮುದಾದೇವಿಯವರು ಕಛೇರಿಯೊಳಗಡೆ ಬರಲು ವಿಷಾದ ಬಟ್ಟದುದರಿಂದ, ಆಕೆಯ ಪರವಾಗಿ ನಾನು ಕಛೇರಿಯವರನ್ನು ಮೇಲೆ ಹೇಳಿದ ರೀತಿ ಪ್ರಾರ್ಥಿಸುತ್ತೇನೆ.

ಪತ್ತೆದಾರ ರಾಧಾಕಾಂತ.

ಅನಂತರ ನ್ಯಾಯಮೂರ್ತಿಗಳು ತಲೆಯನ್ನು ಮೇಲಕ್ಕೆತ್ತಿದರು. ಹಸ್ತದ ಒತ್ತುವಿಕೆಯಿಂದಲೋ ಏನೋ, ಮುಖದ ಬಣ್ಣವು ಬದಲಾಯಿಸಿದ್ದಿತು. ಅವರು ಅಪರಾಧಿಗಳನ್ನು ನೋಡಿ, "ಇದಕ್ಕೆ ನಿಮ್ಮಗಳ ಅಭಿಪ್ರಾಯವೇನು?" ಎಂದು ಕೇಳಿದರು. ಮೂವರೂ ಮಾತನಾಡಲಿಲ್ಲ. ಚಂಚಲೆಯು ತಲೆ ತಿರುಗಿದವಳಾಗಿ ಕೆಳಕ್ಕೆ ಕುಸಿದು ಬಿದ್ದಳು! ಮಗುವು ಅಳತೊಡಗಿತು. ಜವಾನರು ಮಗುವನ್ನು ಪ್ರತ್ಯೇಕವಾಗಿ ಕರೆದುಕೊಂಡು ಹೋದರು. ನ್ಯಾಯಮೂರ್ತಿಗಳು ಪುನಃ ಅಪರಾಧಿಗಳನ್ನು ಕುರಿತು, "ಜಾಗ್ರತೆಯಾಗಿ ಹೇಳಬೇಕು; ಇಲ್ಲವಾದರೆ ಇನ್ನೂ ಕೆಲವು ಸಾಕ್ಷಿಗಳ ವಿಚಾರಣೆಯು ನಡೆಯಬೇಕಾಗಿರುತ್ತದೆ."

ಶ್ರೀಧರನು ಗದ್ಗದಿತ ಕಂಠನಾಗಿ "ಧರ್ಮಾವತಾರ, ಕ್ಷಮಿಸಬೇಕು. ನಾವು ಮರೆಮಾಚಿದರೂ ನಡೆಯುವಂತಿಲ್ಲ. ನಮಗೇನೋ ವಿನಾಶಕಾಲವೊದಗಿತೆಂದು ಅಂತರಾತ್ಮನು ನನಗೆ ಹೇಳುತ್ತಲೇ ಇದ್ದನು. ಹುಂ, ಆಂತರ್ಯದ ದುಃಖಗಳನ್ನು ಹೇಳಿಕೊಂಡೇನು ಪ್ರಯೋಜನ? ಈಗೊಮ್ಮೆ ಬಿಟ್ಟು ಬಿಡಿ. ಇನ್ನೆಂದಿಗೂ ಇಂತಹ ಅಪರಾಧಗಳಿಗೆ ಅವಕಾಶ ಕೊಡುವದಿಲ್ಲ"

ಎಂದು ಹೆಂಗಸಿನಂತೆ ರೋದಿಸತೊಡಗಿದನು.

ನ್ಯಾಯ:—ಸರಿ, ಕರ್ಮಕ್ಕೆ ತಕ್ಕ ಫಲವನ್ನನುಭವಿಸಲೇಬೇಕು.

ಶ್ರೀಧರನು ಮತ್ತೇನನ್ನೋ ಹೇಳ ಹೋದನು. ನ್ಯಾಯಮೂರ್ತಿಗಳಷ್ಟಕ್ಕೇ ತಡೆದರು. ಅನಂತರ ಅವರು ಏನನ್ನೋ ಬರೆಯು ತೊಡಗಿದರು. ಜನಗಳ ಉತ್ಸಾಹವು ಹೆಚ್ಚಾಯಿತು. ನ್ಯಾಯಾಧೀಶರು ತೀರ್ಪು ಬರೆಯುತ್ತಿರುವರು. ಮುಂದಿನ ವಿದ್ಯಮಾನವು ಯಾವರೀತಿ ಪರಿಣಾಮಿಸುವದೋ? ಎಂದು ಪ್ರೇಕ್ಷಕರು ಗುಸ-ಗುಸನೆ ಮಾತನಾಡಿಕೊಳ್ಳುತ್ತಾ ವಿಹ್ವಲರಾಗಿ ನ್ಯಾಯಮೂರ್ತಿಗಳ ಮುಖವನ್ನೇ ನೋಡಹತ್ತಿದ್ದರು.

ನ್ಯಾಯಮೂರ್ತಿಗಳು ಬರೆದು ಪೂರೈಸಿದ ಬಳಿಕ ಗುಮಾಸ್ತೆಯನ್ನು ಕುರಿತು "ಈ ತೀರ್ಪನ್ನು ಓದಿ ಹೇಳು. ನಾನು ಕೊಂಚ ವಿಶ್ರಾಂತಿ ತೆಗೆದುಕೊಳ್ಳಬೇಕಾಗಿದೆ" ಎಂದು ಆಜ್ಞಾಪಿಸಿ, ಜಾಗ್ರತೆಯಾಗಿ ಆಸನದಿಂದಿಳಿದು, ಪ್ರತ್ಯೇಕನಾದ ದ್ವಾರದಿಂದ ವಿಶ್ರಾಂತಿಗೃಹದೊಳಕ್ಕೆ ಹೋದರು. ಅನಂತರ ಗುಮಾಸ್ತನು ಅವನ್ನು ಈ ರೀತಿ ಓದತೊಡಗಿದನು:-

"ಪತ್ತೇದಾರ ರಾಧಾಕಾಂತರು ತಂದಿರುವ ಮೊಕದ್ದಮೆಯು ನಿಜವೆಂದು ತಿಳಿದು ಬಂದಿರುವುದರಿಂದಲೂ, ಕೆಲವು ಆಂತರ್ಯವಾದ ಸಾಕ್ಷಿಗಳ ರುಜುವಾತಿನಿಂದಲೂ ಶ್ರೀಧರಶರ್ಮ, ಚಂಚಲೆ, ಮಾಧವಶರ್ಮ ಇವರುಗಳ ಮೇಲೆ ತಪ್ಪು ಸಾಬೀತಾಗಿ ದೋಷಿಗಳೆಂಬುದಾಗಿ ಧರ್ಮಶಾಸ್ತ್ರವು ಹೇಳುತ್ತದೆ; ಅಲ್ಲದೆ, ಅದಕ್ಕೆ ತಕ್ಕ ದಂಡನೆಯನ್ನು ಈ ಕೆಳಗೆ ಕಂಡ ರೀತ್ಯಾ ವಿಧಿಸಲಾಗಿರುತ್ತೆ.

ಎರಡನೇ ಅಪರಾಧಿನಿ ಚಂಚಲೆಯು ತನ್ನ ದುಷ್ಕಾರ್ಯಕ್ಕೆ ಒಂದನೇ ಅಪರಾಧಿಯಾದ ಶ್ರೀಧರಶರ್ಮನಿಗೆ ಪ್ರೇರೇಪಿಸಿ, ತನ್ನ ಕಾರ್ಯಸಾಧನೆಯನ್ನು ಮಾಡಿಕೊಳ್ಳಲು ಪ್ರಯತ್ನಪಟ್ಟುದರಿಂದ ಲೂ ಮತ್ತು ಕುಮುದಾದೇವಿಯನ್ನು ಕೊಲ್ಲಲು ಅಥವಾ ಕೊಲ್ಲುವಂತೆ ಹೆದರಿಸಿರುವುದರಿಂದಲೂ. ಪರರ ಆಸ್ತಿಯನ್ನು ದಕ್ಕಿಸಿಕೊಳ್ಳುವದರ ಸಲುವಾಗಿ ಲಗ್ನವಾಗಿದ್ದಾಕೆಯನ್ನು ಪುನಃ ಲಗ್ನವಾಗೆಂದು ಪೀಡಿಸಿ ಭಯೋತ್ಪಾದನೆ ಮಾಡಿ ಲಗ್ನ ವೇರ್ಪಡಿಸಿದ್ದರಿಂದಲೂ, ಈಕೆಯು ಅನೇಕ ನಿಬಂಧನೆಗಳನ್ನೊ ಳಗೊಂಡ ಶಿಕ್ಷಾರ್ಹಳಾಗುತ್ತಾಳೆ. ಆದುದರಿಂದ ಈಕೆಗೆ ಮೂರು ವರುಷ ಕಠಿಣ ಶಿಕ್ಷೆಯನ್ನು ವಿಧಿಸಲಾಗಿದೆ.

ಒಂದನೇ ಅಪರಾಧಿಯು, ತಾನು ಸ್ವಯಂ ತಿಳಿದವನಾಗಿ ಯೂ ಇದ್ದು, ಸ್ತ್ರೀವ್ಯಾಮೋಹಪರನಾಗಿ ಎರಡನೇ ಅಪರಾಧಿಯ ಮಾತಿನಂತೆ ಕುಣಿಯುತ್ತಾ ತನ್ನ ಪ್ರಮಾಣ ವಚನವನ್ನು ಸಹ ಹಾಳುಮಾಡಿಕೊಂಡು ಮೋಸ ಮಾಡಿರುವದಲ್ಲದೆ, ತಾನೂ ಸಹ ಮೋಸಕ್ಕೊಳಪಟ್ಟಿರುತ್ತಾನೆ. ಆದುದರಿಂದ ಈತನಿಗೆ ಒಂದು ವರ್ಷ ಕಠಿಣ ಶಿಕ್ಷೆ ವಿಧಿಸಲಾಗಿದೆ.

ಮೂರನೇ ಅಪರಾಧಿ ಮಾಧವಶರ್ಮನು ಒಂದು-ಎರಡನೇ ಅಪರಾಧಿಗಳೊಡನೆ ಸಹಕರಿಸಿ, ಕುಮುದಾದೇವಿಯನ್ನು ಹೆದರಿ ಸಿದ್ದಕ್ಕಾಗಿಯೂ, ಕೊಲ್ಲುವದಾಗಿ ಭಯೋತ್ಪಾದನೆಯನ್ನುಂಟು ಮಾಡಿದುದಕ್ಕಾಗಿಯೂ ಎರಡು ವರ್ಷಗಳ ಕಠಿಣ ಶಿಕ್ಷೆವಿಧಿಸಲಾ ಗಿದೆ.

ಪ್ರಮೋದಕುಮಾರ, ಬಿ ಎ.
ಒಂದನೇ ತರಗತಿ ನ್ಯಾಯಾಧಿಪ,
ಭವಾನಿಪುರ.

ತೀರ್ಪು ಹೇಳುವದು ಪೂರ್ತಿಯಾಗುವುದರೊಳಗಾಗಿ ಮೂವರು ಅಪರಾಧಿಗಳ ಕರಗಳಿಗೂ ಕೈ-ಕೋಳಗಳು ತೊಡಿಸಲ್ಪಟ್ಟವು. ಜೀವಚ್ಛವಗಳಂತಿದ್ದ ಅವರನ್ನು ಮರುಕ್ಷಣದಲ್ಲಿಯೇ ಆ ಸ್ಥಳದಿಂದ ತೊಲಗಿಸಿಕೊಂಡು ಹೋದರು. ಪ್ರೇಕ್ಷಕರು ಹಲವು ಬಗೆಯಾಗಿ ಮಾತನಾಡಿಕೊಳ್ಳುತ್ತಾ ಒಬ್ಬೊಬ್ಬರಾಗಿ ಕಾಲಿಗೆ ಬುದ್ಧಿ ಹೇಳಿದರು. ಆ ದಿವಸ ಕಚೇರಿಯು ಅಷ್ಟಕ್ಕೇ ನಿಲ್ಲಿಸಲ್ಪಟ್ಟಿತು.

ನ್ಯಾಯಾಸ್ಥಾನದಲ್ಲಿ ರಾಧಾಕಾಂತನೊಬ್ಬನ ವಿನಃ ಉಳಿದವರೆಲ್ಲರೂ ಹೊರಟು ಹೋದರು. ಇದಾದ ಕೊಂಚ ಹೊತ್ತಿನಲ್ಲಿಯೇ ನ್ಯಾಯಮೂರ್ತಿಗಳು ವಿಶ್ರಾಂತಿ ಮಂದಿರದಿಂದ ಕುಮುದಾ ದೇವಿಯವರೊಂದಿಗೆ ನ್ಯಾಯಮಂದಿರದೊಳಕ್ಕೆ ಬಂದು, ರಾಧಾಕಾಂತನನ್ನು ನೋಡಿ "ಮಿತ್ರಾ, ನಿನ್ನ ಉಪಕೃತಿಯನ್ನೆಂತು ಬಣ್ಣಿಸಲಿ?" ಎಂದರು. ಆನಂದಾತಿಶಯದಿಂದ ಅದಕ್ಕೆ ಉತ್ತರವೀಯುತ್ತಾ, ರಾಧಾಕಾಂತನು "ಸದ್ಯಕ್ಕೆ ಕೋಪಮಾಡದೆ, ಕೃಪೆಮಾಡಿದಿರಲ್ಲ! ಅಷ್ಟಕ್ಕೇ ಧನ್ಯನಾದೆನು."

ಹೀಗೆಂದು ಮಾತನಾಡಿಕೊಳ್ಳುತ್ತಾ ಹೊರಗಡೆಗೆ ಬಂದರು. ಶಕಟವೊಂದು ಸಿದ್ಧವಾಗಿದ್ದಿತು. ಮೂವರೂ ಅದರಲ್ಲಿ ಕುಳಿತರು. ಶಕಟವು ತನ್ನ ಚಲನಾಚಾತುರ್ಯವನ್ನು ತೋರ್ಪಡಿಸುತ್ತಾ ಹೊರಟಿತು.



[೧೭]




ಲಭಾಸ್ಕರನ ಎಳೆಗಿರಣಗಳಿಂದ ಮೂಡಲವು ಪ್ರಭಾಜನಿತವಾಗಿದ್ದಿತು. ಎಳೆಯ ಗಿಡ-ಬಳ್ಳಿಗಳ ಮೇಲಿನ ಹಿಮಬಿಂದುಗಳು ಮುತ್ತುಗಳಂತೆ ಮೆರಗುತ್ತಿದ್ದವು. ಎಳೆಬಿಸಿಲಿನ ಒಲವಿಗೆ ಮೈ ಮರೆತಿದ್ದ ದ್ವಿಜಸಂತತಿಯ ಕಾಕಲೀ ನಿನಾದವು ಕಿವಿಗಿಂಪಾಗಿದ್ದಿತು. ಬಹಳ ಕಾಲದಿಂದಲೂ ತಮ್ಮ ಪ್ರಿಯನನ್ನಗಲಿದ್ದ ಕಮಲಗಳು, ಮಿತ್ರಾಗಮನದಿಂದ ವಿಕಸಿತವದನವಾದುವು. ಅಂತಹ ಸಮಯದಲ್ಲಿ ಪ್ರಕೃತಿರಮಣಿಯ ಸೊಬಗನ್ನು ನೋಡುತ್ತಾ ಪ್ರಮೋದಕುಮಾರನು ತನ್ನ ನಿವಾಸದ ಮುಂದಿನ ಕೈ ತೋಟದಲ್ಲಿ ನಿಂತಿದ್ದನು. ಆಗ ಕುಮುದಾದೇವಿಯಾತನಿದ್ದಲ್ಲಿಗೆ ಬಂದು 'ಹೊತ್ತು ಮೂಡಿ ಬಹಳ ಹೊತ್ತಾಗುತ್ತಾ ಬಂದರೂ ಕಸಗೂಡಿಸುವ ಪರಿಚಾರಕಳಿನ್ನೂ ಬರಲೇ ಇಲ್ಲ.' ಎಂಬುದಾಗಿ ಹೇಳಿದಳು. ಪ್ರಮೋದನು, "ಹಿಂದುಗಳ ಲಕ್ಷಣವೇ ಹೀಗೆ. ಹೊಟ್ಟೆಗೆ ಹಿಟ್ಟಿಲ್ಲದಿದ್ದರೂ ದುರಭಿಮಾನ-ಸೋಮಾರಿತನಗಳಿಂದ ಮೆರೆದು ಹೋಗುತ್ತಾರೆ. ಹೋಗಲಿ. ಈ ದಿನವೇ ಬೇರೆಯವಳನ್ನು ಗೊತ್ತು ಮಾಡುತ್ತೇನೆ." ಎಂದು ಹೇಳುತ್ತಿದ್ದಂತೆಯೇ "ಒಂದು ಹಿಡಿ ಭಿಕ್ಷಾ ನೀಡಿ, ತಾಯಿ!" ಎಂಬ ದೀನವಾಣಿಯು ಕೇಳಬಂದಿತು. ಕುಮುದೆಯೂ, ಪ್ರಮೋದನೂ ತುಂಡುಗೋಡೆಯ ಹೆಬ್ಬಾಗಿಲ ಕಡೆ ನೋಡಿದರು. ಒಬ್ಬ ವಯಸ್ಸು ಮೀರಿದ ಹೆಂಗಸು ಚಿಂದಿ ಬಟ್ಟೆಗಳನ್ನುಟ್ಟು ವಿಕೃತಾಕಾರವಾಗಿ, ನಿಂತಿರಲು ಸಹ ತ್ರಾಣವಿಲ್ಲದೆ,

ಊರುಗೋಲಿನ ಆಧಾರದಿಂದ ನಡುಗುತ್ತಿದ್ದಳು. ಪಕ್ಕದಲ್ಲೊಬ್ಬ ಪ್ರಾಯದ ಹುಡುಗಿ. ಅವಳೂ ಅದೇ ವೇಷದಲ್ಲಿದ್ದಳಾದರೂ, ಅವಳ ಮುಖದಲ್ಲಿನ ಕಾಂತಿಯು ಮಾತ್ರ ರಸಿಕರನ್ನು ರಂಜಿಸುವಂತಿದ್ದಿತು. ಕೆಲವರು ಉಡಿಗೆ-ತೊಡಿಗೆಗಳಿಂದಲೂ ಒಡವೆ-ವಸ್ತುಗಳಿಂದಲೂ ರೂಪವತಿಯರಾಗುವೆವೆಂದು ಭಾವಿಸುವರು; ಆದರೆ ಆ ಭಿಕಾರಿಣಿಯ ಆಕಾರವು ಅಂತಹುದಲ್ಲ. ಅವಳ ಕಂಕುಳಲ್ಲೊಂದು ಗಂಡು ಮಗು. ಅದಕ್ಕೆ ಬಟ್ಟೆಯೇ ಇಲ್ಲ. ಭಿಕಾರಿಣಿಯ ಚಿಂದಿಯ ಸೆರಗೇ ಅದಕ್ಕೆ ಬಟ್ಟೆ. ಆ ದೃಶ್ಯವನ್ನು ನೋಡಿ ಕುಮುದೆಯ ಹೃದಯವು ಕರಗಿ ನೀರಾಯಿತು! ಆಕೆಯು ಕರುಣಾಸಪೂರಿತವಾದ ವಾಣಿಯಿಂದ, "ಇಲ್ಲಿ ಬಾರೆ ಅಮ್ಮಾ" ಎಂದು ಕರೆದಳು. ಅವಳು ತಾನೊಬ್ಬಳೇ ಹೋಗಬೇಕೋ-ಜೊತೆಯವಳನ್ನೂ ಕರೆದುಕೊಂಡು ಹೋಗಬೇಕೋ ತೋಚದೆ, ಯೋಚಿಸುತ್ತಾ ಹಾಗೆಯೇ ನಿಂತಳು. ಪ್ರಮೋದನೂ ಕುಮುದೆಯೂ ಬಾಗಿಲ ಹತ್ತಿರಕ್ಕೆ ಹೋದರು. ಪ್ರಮೋದನ ಎದೆಯು ದಡ-ದಡನೆ ಹೊಡೆಯತೊಡಗಿತು. ಮೈಮೇಲೆ ಕೂದಲುಗಳೆದ್ದುವು. ಅವನನ್ನು ನೋಡುತ್ತಲೇ ವಯಸ್ಸು ಮೀರಿದ ಹೆಂಗಸು, ಸಿಂಹವನ್ನು ಕಂಡ ಸಲಗದಂತಾದಳು. ಸ್ವಲ್ಪ ಹೊತ್ತು ಹಾಗೆಯೇ ನಿಂತಿರಲು, ಸಾಧ್ಯವಿಲ್ಲದೆ ದೊಪ್ಪನೆ ಬಿದ್ದುಬಿಟ್ಟಳು! ಬಂಡೆಯೊಂದಕ್ಕೆ ತಲೆಯು ಥಕ್ಕೆ ಹೊಡೆಯಿತು. ಬಿದ್ದವಳು ಹಾಗೆಯೇ ದೀರ್ಘನಿದ್ರಾಪರವಶಳಾದಳು. ಮತ್ತೊಬ್ಬಳು ಬವಳಿ ಬಂದಂತಾಗಿ, ಮಗುಸಮೇತ ಪ್ರಮೋದನ ಪಾದಗಳ ಮೇಲುರುಳಿದಳು. ಕುಮುದೆಯು ಆ ಸಂಘಟನೆಯನ್ನು ನೋಡುತ್ತಾ, ಹಾಗೆಯೇ ಪ್ರಮೋದನ ಕಡೆಗೆ

ನೋಡಿದಳು. ಪ್ರಮೋದನ ಕಣ್ಣುಗಳಿಂದ ಎರಡು ತೊಟ್ಟು ಉಷ್ಣೋದಕಗಳು ಗಂಡಸ್ಥಲದ ಮೇಲೆ ಹಾದು ಹೋದುವು. ಕುಮುದೆಗೆ ಭಯಾಶ್ಚರ್ಯಗಳೇಕಕಾಲದಲ್ಲುಂಟಾದುವು. ಪ್ರಮೋದನು ಪ್ರಜ್ಞೆಯಿಲ್ಲದವನಂತೆ, ತನ್ನ ಅಧಿಕಾರ-ಗೌರವವನ್ನು ಸಹಾ ತೊರೆದು "ಏಳು ರತ್ನಾ, ಏನೀ ಅವಸ್ಥೆ?" ಎಂದು, ಮೇಲೆ ಬಿದ್ದವಳ ತೋಳುಗಳನ್ನು ಹಿಡಿದೆಬ್ಬಿಸಿದನು. ಕುಮುದೆಯು ಇದನ್ನು ಕಂಡು, ಏನೂ ತೋಚದೆ ಮಗುವನ್ನು ತಾನೆತ್ತಿಕೊಂಡು "ಯಾರಿವರು?" ಎಂಬುದಾಗಿ ಗಂಡನನ್ನು ಕೇಳಿದಳು. ಪ್ರಮೋದನು ಸಂತಾಪದ ಉದ್ವೇಗದಲ್ಲಿ 'ಕುಮುದಾ, ಇವರೆ?..' ಎಂದು, ಏನೂ ಹೇಳಲಾರದವನಾಗಿ ಅಷ್ಟಕ್ಕೇ ನಿಲ್ಲಿಸಿದನು. ಭಿಕಾರಿಣಿಯು ಆ ಹೊತ್ತಿಗೆ ಕೊಂಚ ಚೇತರಿಸಿಕೊಂಡು ದುಃಖ ಜನಿತವಾದ ವಾಣಿಯಿಂದ "ತಾವು ಅಂದು ರಾತ್ರೆ ಹೇಳಿ ಹೋದ ಮಾತುಗಳು ಈಗ ಹೇಳಿದಂತಿದೆ"

ಪ್ರಮೋದ:—ಈ ಸ್ಥಿತಿಯೇನು?

ಭಿಕಾರಿಣಿ:---ಆ ರಾತ್ರೆ ತಮ್ಮನ್ನು ಸಾಗಗಳಿಸಿದ ನಾನು ಮನೆಯ ತಲಬಾಗಿಲ ಅಗುಳಿಯನ್ನು ಹಾಕಲು ಮರೆತು ಹೋದೆ. ಅಂದು ಮನೆಯಲ್ಲಿ ಸ್ವಲ್ಪ ಜಗಳವೂ ಆಯಿತು. ಅಂದೇ ಯಾರೋ ಮನೆಯೊಳಗೆ ಹೊಕ್ಕು, ನಮ್ಮ ಸಕಲ ಆಸ್ತಿಯನ್ನೂ ಸೋಚಿಕೊಂಡು ಹೋದರು. ಆನಂತರ ನಮ್ಮ ತಾಯಿಯೂ ನಾನೂ ದಿಕ್ಕು ಕಾಣದೆ, ಬಹಳ ಅವಸ್ಥೆಗೆ ಗುರಿಯಾದೆವು. ತಾವು ಪುನಃ ಬರಲೇ ಇಲ್ಲ. ನನ್ನ ಅಂತರಂಗವನ್ನು ಬೇರ್ಪಡಿಸ ಬೇಕೆಂದು ನಮ್ಮ ತಾಯಿಯು ಬಹಳ ಹೇಳಿ ನೋಡಿದಳು. ಬೈದಳು; ಹೊಡೆದಳು. ಏನು ಮಾಡಿದರೂ ಅವಳ ಫಲವು ಫಲಿಸ

ಲಿಲ್ಲ. ನನ್ನ ಅಂತರಾತ್ಮನು ಅದಕ್ಕೆ ಒಪ್ಪಲಿಲ್ಲ. ಆದೇತಕ್ಕೆಂಬುದು ನನಗೆ ತಿಳಿಯದು. ಕಡೆಗೆ ಹಣವನ್ನರ್ಜಿಸಲು ಮಾರ್ಗವಿಲ್ಲದೆಯೂ, ತಮ್ಮನ್ನು ಕಾಣದೆಯೂ, ಅದೇ ಪಟ್ಟಣದಲ್ಲಿ ಯಾಚಕವೃತ್ತಿಯನ್ನವಲಂಬಿಸಲು ನಾಚಿಕೆಯಿಂದ ಮನಸೊಪ್ಪದೆಯೂ ಈ ರೀತಿ ಅಲೆಯುತ್ತಿದ್ದೆವು. ಅನಂತರ ಈ ದೌರ್ಭಾಗ್ಯನ ಗರ್ಭವು ಬೇರೆ ನಿಂತಿರುವುದಾಗಿ ತಿಳಿದು ಬಂದಿತು. ಅಯ್ಯೋ! ಆ ಕಷ್ಟಗಳನ್ನೆಲ್ಲಾ ಮನಸ್ಸಿಗೆ ತಂದರೆ, ಹೃದಯವೇ ಒಡೆದು ಹೋಗುತ್ತದೆ.

ಹೀಗೆಂದು ರೋಧಿಸಿದಳು. ಪ್ರಮೋದನು ಸಂಕಟಪಡುತ್ತಾ "ನಿಮ್ಮ ತಾಯಿಯು ಮೃತಳಾದಳಲ್ಲಾ!" ಎಂದನು. "ಇಂದಿಗೆ ನಾನೇ ಧನ್ಯಳಾದುದು," ಎಂದು ಭಿಕಾರಿಣಿಯು ಶಾಂತಳಾಗಿ ಹೇಳಿದಳು. ಅನಂತರ ಪ್ರಮೋದನು "ಪಾಪಿಗೆ ತಕ್ಕ ಪ್ರಾಯಶ್ಚಿತ್ತವಾದಂತಾಯಿತಲ್ಲವೇ ರತ್ನಾ ?" ಎಂದನು. "ಅಯ್ಯೋ! ನನಗಿಂತಲೂ ಪಾಪಿಗಳು ಈ ಲೋಕದಲ್ಲುಂಟೆ? ಈ ಗತಪ್ರಾಣಳ ಮಾತಿನ ಹೆದರಿಕೆಗೆ, ನಾನು ತಮಗೆ ಅನೇಕ ವಿಧದಲ್ಲಿ ದ್ರೋಹ ಮಾಡಿರುವೆನು. ಅಂಚೆಗೆ ಹಾಕ.........." ಮುಂದೆ ಮಾತು ಹೇಳಗೊಡಿಸದೆ ಪ್ರಮೋದನು "ನನಗೆ ಗೊತ್ತು. ಮುಂದಕ್ಕೆ ಹೇಳಬೇಡ" ಎಂದನು. ವಿಸ್ಮಯಪೂರಿತ ನೇತ್ರಗಳಿಂದ ಭಿಕಾರಿಣಿಯು "ಏನು, ತಮಗೆ ಗೊತ್ತೇ?" ಎಂದಳು. ಪ್ರತಿಯಾಗಿ "ಅಹುದು" ಎಂದನು ಪ್ರಮೋದನು ವಿಹ್ವಲನಾಗಿ. ಭಿಕಾರಿಣಿಯು "ಮಹಾಶಯ, ಅನಂತರ ತಮ್ಮನ್ನೆ ಅರಸುತ್ತಿದ್ದೆ. ದೊರೆತಿರಿ. ಜೊತೆಯಲ್ಲಿದ್ದ ಕಂಟಕಳೂ ತೊಲಗಿದಳು. ಈ ಜನ್ಮದಲ್ಲಿ ನನಗೇನು ಬೇಕೋ ಆ ಕಷ್ಟ-ಸುಖಗಳನ್ನೂ ಅನುಭವಿಸಿ

ದ್ಧಾಯಿತು. ನನಗೆ ಮತ್ತಾವುದೂ ಬೇಡ. ತಮ್ಮ ಚರಣ ಸೇವೆ ಮಾಡಲು ಸಹ ನಾನು ಅಯೋಗ್ಯಳು; ಆದರೆ ಒಂದನ್ನು ಮಾತ್ರ ತಾವು ಕರುಣಿಸಬೇಕು.'' ಎಂದಳು.

ಪ್ರಮೋದ:—ಯಾವುದನ್ನು?

ಭಿಕಾರಿಣಿ:---ತಾವು ಅನುಗ್ರಹಿಸುವುದಾದರೆ ಹೇಳುತ್ತೇನೆ.

ಪ್ರಮೋದ:—ಹೇಳು, ನೋಡುವಾ.

ಭಿಕಾರಿಣಿ :— ಈ ಭಿಕಾರಿಣಿಯನ್ನು ಪರಿಚಾರಕಳನ್ನಾಗಿ ತಮ್ಮ ಆಶ್ರಯದಲ್ಲಿಟ್ಟುಕೊಂಡು ಉದ್ಧಾರಮಾಡಬೇಕೆಂದು ಬೇಡುವೆನು.

ಕುಮುದೆಗೆಲ್ಲವೂ ಗೊತ್ತಾದಂತಾಯಿತು. ಪ್ರಮೋದನು ಕುಮುದೆಯ ಕಡೆಗೆ ಪ್ರಶ್ನೆಮಾಡುವ ದೃಷ್ಟಿಯಿಂದ ನೋಡಿದನು. ಆಗ ಕುಮುದೆಯು ಕಂಕುಳದಲ್ಲಿದ್ದ ಮಗುವನ್ನು ಮುದ್ದಿಡುತ್ತಾ '' ತಮ್ಮ ಅಚ್ಚಿನಲ್ಲೊತ್ತಿದಂತಿದೆ, ಈ ಮಗು!" ಎಂದಳು ಮಂದಹಾಸ್ಯದಿಂದ. ಪ್ರಮೋದನು ಆ ಪ್ರತ್ಯುತ್ತರ ಬರುವುದೆಂದು ಕನಸಿನಲ್ಲಿಯೂ ತಿಳಿದಿರಲಿಲ್ಲ. ಉದ್ವೇಗಪೂರಿತನಾದ ಅವನು, ಗದ್ಗದಿತ ಕಂಠನಾಗಿ ಹೀಗೆಂದು ಹೇಳಿದನು:

''ಕುಮುದಾ, ನೀನು ಕೇವಲ ಕುಮುದಳೇ ಅಲ್ಲ, ಕುಮುದ ಮಣಿ!''

---

